KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೫ | ಬೆಂಗಳೂರು, ಗುರುವಾರ, ಏಪ್ರಿಲ್ ೨೨, ೨೦೧೦ (ವೈಶಾಖ ೨, ಶಕ ವರ್ಷ ೧೯೩೨) | ಸಂಚಿಕೆ ೧೬ |
|---|---|---|

## ಭಾಗ – ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ಆಯುಕ್ತರವರ ಕಾರ್ಯಾಲಯ, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, 2ನೇ ಮಹಡಿ**
**ಸರ್.ಎಂ. ವಿಶ್ವೇಶ್ವರಯ್ಯ ಚಿಕ್ಕ ಗೋಪುರ, ಡಾ: ಬಿ.ಆರ್. ಅಂಬೇಡ್ಕರ್ ವೀದಿ, ಬೆಂಗಳೂರು – 560 001**

**ಅಧಿಸೂಚನೆ**

**ಪ್ರಕಟಣೆ ಸಂಖ್ಯೆ ಆಪಸಂ/ಸಿಬ್ಬಂದಿ–2/ವಿವ–271/2009–10 ಬೆಂಗಳೂರು ದಿನಾಂಕ: 9ನೇ ಏಪ್ರಿಲ್ 2010**
**ಭರ್ತಿಮಾಡಿದ ಅರ್ಜಿಗಳನ್ನು ಸ್ವೀಕರಿಸಲು ನಿಗಧಿಪಡಿಸಲಾದ ಕೊನೆಯ ದಿನಾಂಕ: 07.05.2010**

**ವಿಷಯ: 287** ಪಶುವೈದ್ಯಾಧಿಕಾರಿಗಳ ಹುದ್ದೆಯನ್ನು ತುಂಬಲು ಅರ್ಜಿಗಳನ್ನು ಆಹ್ವಾನಿಸಿರುವುದು

ಸರ್ಕಾರದ ಅಧಿಸೂಚನೆ ಸಂಖ್ಯೆ ಪಸಂಮೀ/94/ಪಸಸೇ/2009 ದಿನಾಂಕ: 08.04.2010 ನಿಯಮಾವಳಿಯನ್ವಯ 287 ಖಾಲಿ ಪಶುವೈದ್ಯಾಧಿಕಾರಿಗಳ ಬಿ ಗುಂಪಿನ ಹುದ್ದೆಗಳನ್ನು (ವೇತನ ಶ್ರೇಣಿ. 13000–23850) ಕರ್ನಾಟಕ ಪಶುಸಂಗೋಪನೆ ಮತ್ತು ಪಶುವೈದ್ಯ ಸೇವೆ (ಪಶುವೈದ್ಯಾಧಿಕಾರಿಗಳ ನೇರ ನೇಮಕಾತಿ) (ವಿಶೇಷ ನೇಮಕಾತಿ) ನಿಯಮಗಳು 2009 ರನ್ವಯ ಆಯ್ಕೆಗಾಗಿ ಪರಿಗಣಿಸಲು ಅರ್ಹ ಅಭ್ಯರ್ಥಿಗಳಿಂದ ನಿಗಧಿತ ನಮೂನೆಯಲ್ಲಿ ದ್ವಿಪ್ರತಿಗಳಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಅರ್ಜಿಯನ್ನು ಈ ಪ್ರಕಟಣೆಯಲ್ಲಿ ಕಾಣಿಸಿರುವ ನಮೂನೆಯಲ್ಲಿ ಬೆರಳಚ್ಚು ಮಾಡಿದ/ಗಣಕೀಕೃತ ಅರ್ಜಿಗಳನ್ನು ಸ್ವೀಕರಿಸಲಾಗುವುದು. ಕೈಬರಹದ/ಜೆರಾಕ್ಸ್/ಮುದ್ರಿತ ಅಥವಾ ಇತರೆ ಯಾವುದೇ ಆಯ್ಕೆ ಪ್ರಾಧಿಕಾರದ / ಆಯೋಗದ ಅರ್ಜಿಗಳನ್ನು ಒಪ್ಪಲಾಗುವುದಿಲ್ಲ.

1. ಆಯ್ಕೆಯನ್ನು ಬಿ.ವಿ.ಎಸ್‌ಸಿ./ಬಿ.ವಿ.ಎಸ್‌ಸಿ ಅಂಡ್ ಎಹೆಚ್ ಪದವಿಯಲ್ಲಿ ಎಲ್ಲಾ ವರ್ಷಗಳಲ್ಲಿ ಗಳಿಸಿದ ಒಟ್ಟು ಶೇಕಡಾವಾರು ಅಂಕಗಳ ಅರ್ಹತೆ ಆಧಾರದ ಮೇಲೆ ಹಾಗೂ ಮೀಸಲಾತಿಗನುಗುಣವಾಗಿ ನಡೆಸಲಾಗುವುದು.
2. **ನಿಗಧಿಪಡಿಸಿದ ವಿದ್ಯಾರ್ಹತೆ:** ಅರ್ಜಿ ಸಲ್ಲಿಸಲು ನಿಗಧಿಪಡಿಸಲಾದ ಅಂತಿಮ ದಿನಾಂಕದಂದು ಅಭ್ಯರ್ಥಿಯು ಭಾರತದಲ್ಲಿ ಕಾನೂನು ರೀತ್ಯ ಸ್ಥಾಪಿಸಲಾದ ಯಾವುದೇ ಪಶುವೈದ್ಯಕೀಯ ವಿಜ್ಞಾನ ವಿಶ್ವವಿದ್ಯಾಲಯ ಅಥವಾ ಕೃಷಿ ವಿಶ್ವವಿದ್ಯಾಲಯದಿಂದ ಬಿ.ವಿ.ಎಸ್‌ಸಿ./ಬಿ.ವಿ.ಎಸ್‌ಸಿ. ಅಂಡ್ ಎಹೆಚ್ ಪದವಿಯನ್ನು ಪಡೆದಿರಬೇಕು ಹಾಗೂ ಕರ್ನಾಟಕ ಪಶುವೈದ್ಯಕೀಯ ಪರಿಷತ್ತಿನ ಕಾಯ್ದೆ 1984ರ ಅಡಿಯಲ್ಲಿ ನೋಂದಣಿಯಾಗಿರಬೇಕು.
3. **ವಯೋಮಿತಿ:** ಅಭ್ಯರ್ಥಿಗಳಿಂದ ಪೂರ್ಣಗೊಳಿಸಿದ ಅರ್ಜಿಗಳನ್ನು ಸ್ವೀಕರಿಸಲು ನಿಗಧಿಪಡಿಸಿದ ಅಂತಿಮ ದಿನಾಂಕದಂದು ನಿಗಧಿಪಡಿಸಿದ ಕನಿಷ್ಠ ವಯೋಮಿತಿಯಲ್ಲಿರಬೇಕು ಹಾಗೂ ನಿಗದಿತ ಗರಿಷ್ಠ ವಯೋಮಿತಿಯನ್ನು ಮೀರಿರಬಾರದು. ವಯೋಮಿತಿಯನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ. ಡಿಪಿಎಆರ್/42/ಎಸ್‌ಆರ್‌ಆರ್/2008 ದಿನಾಂಕ: 18.12.2008 ರ ಮೇರೆಗೆ ನಿಗಧಿಪಡಿಸಲಾಗಿದೆ.

| | |
|---|---|
| ಕನಿಷ್ಠ | 18 ವರ್ಷಗಳು |
| ಗರಿಷ್ಠ | 35 ವರ್ಷಗಳು |
| ಪ್ರವರ್ಗ IIಎ, IIಬಿ<br>ಪ್ರವರ್ಗ IIIಎ, IIIಬಿ | 38 ವರ್ಷಗಳು |
| ಪಜಾ, ಪಪಂ. ಪ್ರವರ್ಗ–I | 40 ವರ್ಷಗಳು |

3.1 ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ ಅವನು ಸಶಸ್ತ್ರ ಕೇಂದ್ರ ದಳದಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಆ ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳಷ್ಟು ಗರಿಷ್ಠ ವಯೋಮಿತಿಗೆ ವಿನಾಯಿತಿ ನೀಡಿದೆ.

**ವಿವರಣೆ:–** ಮಾಜಿ ಸೈನಿಕ ಎಂದರೆ ಕೇಂದ್ರ ಸಶಸ್ತ್ರ ದಳಗಳಾದ ನಿಯಮಿತ ಭೂದಳ, ನೌಕಾದಳ ಮತ್ತು ವಾಯುದಳದಲ್ಲಿ ಯಾವುದೇ ಶ್ರೇಣಿಯಲ್ಲಿ (ಯೋಧ ಅಥವಾ ಅಯೋಧನಂತೆಯಾಗಲಿ) ಸೇವೆ ಸಲ್ಲಿಸಿದ ವ್ಯಕ್ತಿ. ಆದರೆ ಡಿಫೆನ್ಸ್ ಸೆಕ್ಯೂರಿಟಿ ಕಾರ್ಪ್ಸ್, ಜನರಲ್ ರಿಸರ್ವ್ ಇಂಜಿನಿಯರಿಂಗ್ ಫೋರ್ಸ್, ಲೋಕ ಸಹಾಯಕ ಸೇವೆ ಮತ್ತು ಪ್ಯಾರಾ ಮಿಲಿಟರಿ ದಳದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಸೇರ್ಪಡೆಯಾಗುವುದಿಲ್ಲ; ಮತ್ತು

(ಎ) ಅಂತಹ ಸೇವೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವ;

ಅಥವಾ

(ಬಿ) ವೈದ್ಯಕೀಯ ಕಾರಣಗಳಿಂದ ಮಿಲಿಟರಿ ಸೇವೆಗೆ ದೋಷ ಪೂರಿತನಾದವನೆಂದೋ ಅಥವಾ ವ್ಯಕ್ತಿಯ ಹಿಡಿತಕ್ಕೂ ದಾಟಿದ ಪರಿಸ್ಥಿತಿಗಳಿಂದ ಮತ್ತು ವೈದ್ಯಕೀಯ ಅಥವಾ ಅಸಮಾರ್ಥ್ಯದ ಪಿಂಚಣಿ ಪಡೆದು ಅಂತಹ ಸೇವೆಯಿಂದ ಬಿಡುಗಡೆಯಾದವನು; ಅಥವಾ

(ಸಿ) ಸ್ವಂತ ಕೋರಿಕೆ ಮೇರೆಗೆ ಅಲ್ಲದೆ ಸಂಸ್ಥೆಯ ಕಡಿತದ ಪರಿಣಾಮದಿಂದ ಅಂತಹ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿ; ಅಥವಾ

(ಡಿ) ತನ್ನ ಸ್ವಂತ ಕೋರಿಕೆ ಮೇರೆಗೆ ಅಥವಾ ದುರ್ವರ್ತನೆ ಅಥವಾ ಅಸಾಮರ್ಥ್ಯದ ಕಾರಣದಿಂದಾಗಿ ತೆಗೆದುಹಾಕಿರುವ ಅಥವಾ ಕರ್ತವ್ಯ ಪರಿಗಣಿಸಿದ ಮತ್ತು ಅವರಿಗೆ ಗ್ರಾಚುಯಿಟಿ ನೀಡಿರುವ ವ್ಯಕ್ತಿಯಲ್ಲದ ನಿರ್ದಿಷ್ಟ ಅವಧಿಯನ್ನು ಪೂರೈಸಿದ ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಪ್ರಾಂತ್ಯದ ಸೇನೆಯ ಈ ಕೆಳಗೆ ಹೆಸರಿಸಿದ ವರ್ಗದ ಸಿಬ್ಬಂದಿಯವರು ಸೇರ್ಪಡೆಯಾಗುತ್ತಾರೆ.

(i) ನಿರಂತರ ಸೇವೆ ಸಲ್ಲಿಸಿ ನಿವೃತ್ತಿಹೊಂದಿದ ಪಿಂಚಣಿದಾರರು

(ii) ಮಿಲಿಟರಿ ಸೇವೆಯಿಂದಾಗಿ ಉಂಟಾದ ದೈಹಿಕ ಅಸಮರ್ಥತೆ ಹೊಂದಿ ಬಿಡುಗಡೆಯಾದ ವ್ಯಕ್ತಿ

(iii) ಗ್ಯಾಲಂಟ್ರಿ ಪ್ರಶಸ್ತಿ ವಿಜೇತರು

**ವಿವರಣೆ:–** ಕೇಂದ್ರ, ಸಶಸ್ತ್ರ ದಳದಲ್ಲಿ ಸೇವೆಯಲ್ಲಿರುವ ವ್ಯಕ್ತಿಗಳು ಸೇವೆಯಿಂದ ನಿವೃತ್ತಿ ಹೊಂದಿದ ನಂತರ "ಮಾಜಿ ಸೈನಿಕ" ನೆಂಬ ವರ್ಗದಡಿ ಬರುವ ವ್ಯಕ್ತಿಗೆ ನಿರ್ದಿಷ್ಟ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಪುನರ್ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿ ಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದೆ. ಆದರೆ ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವವರೆಗೆ ರಾಜ್ಯ ನಾಗರೀಕ ಸೇವೆ ಅಥವಾ ಹುದ್ದೆಗೆ ನೇಮಕ ಹೊಂದುವಂತಿಲ್ಲ.

**3.2** ಅಭ್ಯರ್ಥಿಯು ನ್ಯಾಷನಲ್ ಕ್ಯಾಡೆಟ್ ಕಾರ್ಪ್ಸ್‌ನಲ್ಲಿ ಪೂರ್ಣಕಾಲಿಕ ಪರಿವೀಕ್ಷಕರಾಗಿ ಸೇವೆ ಸಲ್ಲಿಸಿ ಬಿಡುಗಡೆಯಾಗಿರುವ ವ್ಯಕ್ತಿಯಾಗಿದ್ದರೆ ಅಂಥ ಕ್ಯಾಡೆಟ್ ಪರಿವೀಕ್ಷಕನಾಗಿ ಅವನು ಸೇವೆ ಸಲ್ಲಿಸಿದ್ದಷ್ಟು ವರ್ಷಗಳು.

**4.** **<u>ಹುದ್ದೆಗಳ ವರ್ಗೀಕರಣ:</u>** ವಿವಿಧ ಪ್ರವರ್ಗಗಳಿಗೆ ಮೀಸಲಾತಿ ವಿವರಗಳನ್ನು ಕೆಳಗೆ ಒದಗಿಸಲಾಗಿದೆ. ಆದಾಗ್ಯೂ ಪ್ರಕಟಿತ ಹುದ್ದೆಗಳಿಗಿಂತ ಕಡಿಮೆ ಸಂಖ್ಯೆಯ ಹುದ್ದೆಗಳಿಗೆ ಆಯ್ಕೆಯನ್ನು ನಡೆಸಬಹುದಾದ ಹಕ್ಕು

(ಅರ್ಹ ಅಭ್ಯರ್ಥಿಗಳು ಲಭ್ಯವಿಲ್ಲದಿದ್ದಲ್ಲಿ) ಅಧಿಕಾರ ಆಯ್ಕೆ ಸಮಿತಿಗೆ ಇದೆ. ರೋಸ್ಟರ್ ಬಿಂದುವನ್ನು 21ನೇ ಬಿಂದುವಿನಿಂದ ಆರಂಭಿಸಲಾಗಿದೆ.

| | 200 ಹುದ್ದೆ | ಬ್ಯಾಕ್ ಲಾಗ್ ಹುದ್ದೆ | ಮ.ಅ. | ಮಾ.ಸೈ. | ಗ್ರಾ.ಅ | ಕ.ಮಾ.ಅ | ಇತರೆ | ಒಟ್ಟು |
|---|---|---|---|---|---|---|---|---|
| ಪ್ರವರ್ಗ – I | 21 | – | 5 | 2 | 9 | 2 | 3 | 21 |
| ಪ್ರವರ್ಗ – IIA | 87 | – | 18 | 14 | 37 | 7 | 11 | 87 |
| ಪ್ರವರ್ಗ – IIB | 22 | – | 5 | 2 | 9 | 2 | 4 | 22 |
| ಪ್ರವರ್ಗ – IIIA | 10 | – | 5 | – | 3 | – | 2 | 10 |
| ಪ್ರವರ್ಗ – IIIB | 15 | – | 5 | 1 | 5 | – | 4 | 15 |
| ಪಜಾ | 30 | 72 | 37 | 12 | 37 | 7 | 9 | 102 |
| ಪಪಂ | 6 | 15 | 6 | 2 | 7 | 1 | 5 | 21 |
| ಸಾಮಾನ್ಯ ಅರ್ಹತೆ | 9 | – | 4 | – | – | – | 5 | 9 |
| **ಒಟ್ಟು** | 200 | 87 | 85 | 33 | 107 | 19 | 43 | 287 |

**ಷರಾ:– ಪತ್ರ ಸಂ. 6(1) 10713/08–09/ಪಿಎಸ್‌ಸಿ ದಿನಾಂಕ: 23.03.2009 ರಲ್ಲಿ ತಿಳಿಸಿರುವ ಪ್ರಕಾರ, ಕರ್ನಾಟಕ ಲೋಕ ಸೇವಾ ಆಯೋಗದ ಮುಖಾಂತರ 2009 ರಲ್ಲಿ 200 ಹುದ್ದೆಗಳನ್ನು ತುಂಬುವ ಸಂದರ್ಭದಲ್ಲಿ ಆಗಿರುವ ವ್ಯತ್ಯಾಸವನ್ನು ಈ ಆಯ್ಕೆಯಲ್ಲಿ ಹೊಂದಾಣಿಕೆ ಮಾಡಲಾಗಿದೆ.**

ಮೇಲೆ ಕಾಣಿಸಿರುವ ವರ್ಗೀಕರಣವು ಮೀಸಲಾತಿ ಆದೇಶಗಳಲ್ಲಿ ಮಾರ್ಪಾಡು ಆದಲ್ಲಿ ಬದಲಾವಣೆಗೆ ಒಳಪಟ್ಟಿರುತ್ತದೆ. ಪ್ರಸ್ತುತ ಸುತ್ತೋಲೆ ಸಂ. ಸಿಆಸುಇ/16/ಸೇನೇನಿ/2008 ದಿನಾಂಕ: 01.09.2008ರ ಸೂಚನೆಯನ್ನು ಅನುಸರಿಸಲಾಗುವುದು. ಅಲ್ಲದೇ, ಹಾಲಿ ಆಹ್ವಾನಿಸಿದ 287 ಖಾಲಿ ಹುದ್ದೆಗಳ ಸಂಖ್ಯೆ ಮುಂದೆ ಸರ್ಕಾರದ ಆದೇಶಕ್ಕನುಗುಣವಾಗಿ ಹೆಚ್ಚು ಅಥವಾ ಕಡಿಮೆಯಾಗುವ ಬದಲಾವಣೆಗೆ ಒಳಪಟ್ಟಿರುತ್ತದೆ.

4.1 **ಜಾತಿ / ಮೀಸಲಾತಿ ಪ್ರಮಾಣ ಪತ್ರಗಳು**

ಮೀಸಲಾತಿ ಕೋರಬಯಸುವ ಅಭ್ಯರ್ಥಿಗಳು ಈ ಕೆಳಗೆ ನಮೂದಿಸಿರುವ ನಮೂನೆಗಳಲ್ಲಿಯೇ ಮೀಸಲಾತಿ ಪ್ರಮಾಣ ಪತ್ರಗಳನ್ನು ಅರ್ಜಿ ಸಲ್ಲಿಸಲು ನಿಗಧಿಪಡಿಸಿದ ಕೊನೆಯ ದಿನಾಂಕದೊಳಗೆ ಪಡೆದಿಟ್ಟುಕೊಂಡಿರತಕ್ಕದ್ದು. ಅದರ ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.

ಅ) ಪರಿಶಿಷ್ಟ ಜಾತಿ ಮಾತು ಪರಿಶಿಷ್ಟ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು ನಮೂನೆ 'ಡಿ'

ಆ) ಪ್ರವರ್ಗ–1 ಕ್ಕೆ ಸೇರಿದ ಅಭ್ಯರ್ಥಿಗಳು ನಮೂನೆ 'ಇ'

ಇ) ಪ್ರವರ್ಗ–2ಎ, 2ಬಿ, 3ಎ ಮತ್ತು 3ಬಿ ಮೀಸಲಾತಿಗೆ ಸೇರಿದ ಅಭ್ಯಥಿಗಳು ನಮೂನೆ 'ಎಫ್'

ಅರ್ಜಿ ಸಲ್ಲಿಸಲು ನಿಗಧಿಪಡಿಸಿದ ಕೊನೆಯ ದಿನಾಂಕದೊಳಗಾಗಿ ಚಾಲ್ತಿಯಲ್ಲಿರುವ ಮೀಸಲಾತಿ ಪ್ರಮಾಣ ಪತ್ರವನ್ನು ಸಂಬಂಧಿತ ತಹಸೀಲ್ದಾರ್‌ರವರಿಂದ ಪಡೆದಿಟ್ಟುಕೊಂಡು ಅದೇ ಪ್ರಮಾಣ ಪತ್ರವನ್ನು ಕೌನ್ಸಿಲಿಂಗ್ ಸಮಯದಲ್ಲಿ ಹಾಜರುಪಡಿಸತಕ್ಕದ್ದು.

ಈ ಪ್ರಮಾಣ ಪತ್ರದ ಮೂಲ ಪ್ರತಿಯನ್ನು ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು. ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಿ ಅವರ ಅಭ್ಯರ್ಥಿತನವನ್ನು ಅರ್ಹರಾದಲ್ಲಿ ಮಾತ್ರ ಸಾಮಾನ್ಯ ಅರ್ಹತೆಯಡಿಯಲ್ಲಿ ಪರಿಗಣಿಸಲಾಗುವುದು. ಈ ಪ್ರಮಾಣ ಪತ್ರಗಳ ನಮೂನೆಗಳನ್ನು ಅನುಬಂಧದಲ್ಲಿ ತೋರಿಸಲಾಗಿದೆ. ಈ ನಮೂನೆಗಳನ್ನು ಹೊರತುಪಡಿಸಿ ಇತರೆ ಯಾವುದೇ ನಮೂನೆಗಳಲ್ಲಿ ಪಡೆಯಲಾದ ಮೀಸಲಾತಿ ಪ್ರಮಾಣ ಪತ್ರಗಳನ್ನು ತಿರಸ್ಕರಿಸಲಾಗುವುದು.

4.2 ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ ಹೊರತುಪಡಿಸಿ ಉಳಿದಂತೆ ಯಾವುದೇ ಪ್ರವರ್ಗಗಳ ಅಭ್ಯರ್ಥಿಗಳಲ್ಲಿ ಕೊರತೆಯಿದ್ದಲ್ಲಿ ಅಂತಹ ರಿಕ್ತ ಸ್ಥಾನಗಳನ್ನು ಆಯಾ ವರ್ಗಕ್ಕೆ ಸೇರಿದ ಇತರೆ ಅರ್ಹ ಅಭ್ಯರ್ಥಿಗಳಿಂದ ಭರ್ತಿ ಮಾಡುವ ಅಧಿಕಾರ ಆಯ್ಕೆ ಸಮಿತಿಗಿದೆ.

5. ಗ್ರಾಮೀಣ ಅಭ್ಯರ್ಥಿಗಳೆಂದು ಮೀಸಲಾತಿ ಬಯಸುವವರು ಸರ್ಕಾರದ ಆದೇಶ ಸಂಖ್ಯೆ. ಸಿಆಸುಇ/08/ಸೆನೆನಿ/2001 ದಿನಾಂಕ: 13.02.2001 ರಲ್ಲಿ ನಿಗದಿಪಡಿಸಿದ ನಮೂನೆ–1 ಮತ್ತು ಸರ್ಕಾರದ ಆದೇಶ ಸಂಖ್ಯೆ ಸಿಆಸುಇ/96/ಸೆನೆನಿ/2005 ದಿನಾಂಕ: 10.08.2005ರಲ್ಲಿ ನಿಗದಿಪಡಿಸಲಾದ ನಮೂನೆ–2 ರಲ್ಲಿ ಅಭ್ಯರ್ಥಿಗಳು ಉತ್ತೀರ್ಣರಾದ ಸಂಸ್ಥೆಯ ಪ್ರಾಂಶುಪಾಲರು / ಮುಖ್ಯೋಪಾಧ್ಯಾಯರು / ಮುಖ್ಯೋಪಾಧ್ಯಾಯಿನಿಯರಿಂದ ಕ್ಷೇತ್ರ ಶಿಕ್ಷಣಾಧಿಕಾರಿಯ ಮೇಲು ಸಹಿಯೊಂದಿಗೆ ಪಡೆಯಬೇಕು. ಈ ಪ್ರಮಾಣ ಪತ್ರವನ್ನು ಅಭ್ಯರ್ಥಿಗಳು ಅಂತಿಮವಾಗಿ ವ್ಯಾಸಂಗಮಾಡಿದ ಸಂಸ್ಥೆ / ಶಾಲೆಗಳಲ್ಲಿ ಅಭ್ಯಾಸ ಮಾಡಿದ್ದಲ್ಲಿ ಈ ಬಗ್ಗೆ ಆ ಎಲ್ಲಾ ಸಂಸ್ಥೆಗಳಲ್ಲಿ ತಪಾಸಣೆ ಆಗಿರಬೇಕು.

ಅ) ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯ ಅಧಿಸೂಚನೆ ಸಂಖ್ಯೆ. ಸಂವ್ಯಶಾಇ.59 ಶಾಸನ 2000, ದಿನಾಂಕ: 06.01.2001 ರಲ್ಲಿ ಕರ್ನಾಟಕ ಗ್ರಾಮೀಣ ಅಭ್ಯರ್ಥಿಗಳಿಗಾಗಿ (ರಾಜ್ಯ ಸಿವಿಲ್ ಸೇವೆಗಳಲ್ಲಿ) ನೇಮಕಾತಿಗಳ ಅಥವಾ ಹುದ್ದೆಗಳ ಮೀಸಲಾತಿಗಾಗಿ ವಿಧೇಯಕ 2000ದಡಿ ಅವಕಾಶ ಕಲ್ಪಿಸಿ, ಈ ಅಧಿನಿಯಮದ ಉದ್ದೇಶಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ ಸರ್ಕಾರವು ದಿನಾಂಕ: 13.02.2001 ರಲ್ಲಿ ಜಾರಿಗೊಳಿಸಲಾದ ಆದೇಶ ಸಂಖ್ಯೆ ಸಿಆಸುಇ 08 ಸೆನೆನಿ 2001 ನಿಯಮಗಳ ಕಂಡಿಕೆ 3, 4 ಹಾಗೂ 5(1) ರಿಂದ (3) ರನ್ನು ಈ ಕೆಳಗೆ ಉದ್ಧರಿಸಿದೆ.

3. ಸದರಿ ಅಧಿನಿಯಮದಲ್ಲಿ ಗ್ರಾಮೀಣ ಅಭ್ಯರ್ಥಿಯನ್ನು ಈ ಕೆಳಗೆ ಉದ್ಧರಿಸಿದಂತೆ ಪರಿಭಾಷಿಸಲಾಗಿದೆ.

i) ಗ್ರಾಮೀಣ ಅಭ್ಯರ್ಥಿ ಎಂದರೆ ಒಂದು ಹುದ್ದೆಗಾಗಿ ನಿಯಮಿಸಲಾದ ಅರ್ಹತಾ ಪರೀಕ್ಷೆಯ ಎಸ್.ಎಸ್.ಎಲ್.ಸಿ. ಅಥವಾ ಉನ್ನತ ಪರೀಕ್ಷೆಯಾಗಿದ್ದಲ್ಲಿ 1ನೇ ತರಗತಿಯಿಂದ 10ನೇ ತರಗತಿಯವರೆಗೆ;

4. ಈ ಹಿನ್ನೆಲೆಯಲ್ಲಿ ಮೇಲೆ ವಿವರಿಸಿದ ಅಂಶಗಳನ್ನು ಒಳಗೊಂಡ, ಅಂದರೆ (1) ವ್ಯಾಸಂಗ (Study) (2) ಮೀಸಲಾತಿಯ ವರ್ಗ ಮತ್ತು (3) ಮೇಲುಸ್ತರದ ಪರಿಕಲ್ಪನೆ (Creamy Layer Concept) ಈ ಅಂಶಗಳನ್ನು ಒಳಗೊಂಡ ಪ್ರಮಾಣ ಪತ್ರವನ್ನು ಯಾರು ನೀಡಬೇಕು ಎಂಬ ಬಗ್ಗೆ ಸರ್ಕಾರ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

5. ಕರ್ನಾಟಕ ಗ್ರಾಮೀಣ ಅಭ್ಯರ್ಥಿಗಳಿಗಾಗಿ (ರಾಜ್ಯ ಸಿವಿಲ್ ಸೇವೆಗಳಲ್ಲಿ) ನೇಮಕಾತಿಗಳ ಅಥವಾ ಹುದ್ದೆಗಳ ಮೀಸಲಾತಿ ಅಧಿನಿಯಮ, 2000 ರ ಸೆಕ್ಷನ್ 5 ರಿಂದ ಈ ಕೆಳಕಂಡ ಕಾರ್ಯ ವಿಧಾನವನ್ನು ನಿಗದಿಪಡಿಸಿದೆ.

1 ಸಂಬಂಧಿಸಿದ ಅಭ್ಯರ್ಥಿಯು ಯಾವ ಇತರೆ ಹಿಂದುಳಿದ ವರ್ಗಕ್ಕೆ (Other Backward Class) ಸೇರಿದ್ದಾನೆ (ಅದರಲ್ಲಿ ಅವನು ಮೇಲುಸ್ತರದ ಪರಿಕಲ್ಪನೆಯಡಿಯಲ್ಲಿ (Creamy Layer Concept) ಬರುವುದಿಲ್ಲವೆನ್ನುವುದು ಒಳಗೊಂಡಿರುತ್ತದೆ) ಎನ್ನುವ ಬಗ್ಗೆ ಸರ್ಕಾರ (ಅಂದರೆ ಕರ್ನಾಟಕ ಸರ್ಕಾರದ ಸಚಿವಾಲಯದಲ್ಲಿನ ಸಮಾಜ ಕಲ್ಯಾಣ ಇಲಾಖೆ) ಕರ್ನಾಟಕ ಅನುಸೂಚಿತ ಜಾತಿಗಳು ಅನುಸೂಚಿತ ಬುಡಕಟ್ಟುಗಳು ಮತ್ತು ಇತರೆ ಹಿಂದುಳಿದ ವರ್ಗಗಳ (ನೇಮಕಾತಿಗಳು ಮುಂತಾದವುಗಳ ಮೀಸಲಾತಿ) ಅಧಿನಿಯಮ, 1990 ರಡಿಯಲ್ಲಿ ನಿಗದಿಪಡಿಸಿದ ಕಾರ್ಯ ವಿಧಾನದ ಪ್ರಕಾರ ಪ್ರಮಾಣ ಪತ್ರವನ್ನು ಪಡೆಯತಕ್ಕದ್ದು. (ಇತರೆ ಹಿಂದುಳಿದ ವರ್ಗಕ್ಕೆ ಸೇರಿದ ಪ್ರವರ್ಗ- I ಮತ್ತು ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳಿಗೆ ಸೇರಿದ ಅಭ್ಯರ್ಥಿಗಳಿಗೆ ಮೇಲುಸ್ತರದ ಪರಿಕಲ್ಪನೆ (Creamy Layer Concept) ಅನ್ವಯವಾಗುವುದಿಲ್ಲ). ಅಂದರೆ ಜನರಲ್ ಮೆರಿಟ್ ಸೇರಿದಂತೆ ಹಿಂದುಳಿದ ವರ್ಗಗಳಾದ ಪ್ರವರ್ಗ 2ಎ, ಪ್ರವರ್ಗ 2ಬಿ, ಪ್ರವರ್ಗ 3ಎ, ಮತ್ತು ಪ್ರವರ್ಗ 3ಬಿ ಅಭ್ಯರ್ಥಿಗಳಿಗೆ ಮೇಲುಸ್ತರದ ಪರಿಕಲ್ಪನೆ ಅನ್ವಯವಾಗುತ್ತದೆ.

2 ಜನರಲ್ ಮೆರಿಟ್ ವರ್ಗಕ್ಕೆ ಸೇರಿದ ಅಂದರೆ ಮೇಲುಸ್ತರದ ಪರಿಕಲ್ಪನೆಯ ವ್ಯಾಪ್ತಿಯಲ್ಲಿ ಬಾರದ ಗ್ರಾಮೀಣ ಅಭ್ಯರ್ಥಿಗಳು ಪ್ರಮಾಣ ಪತ್ರವನ್ನು ಸಂಬಂಧಿಸಿದ ತಹಸೀಲ್ದಾರ್‌ರವರಿಂದ ಈ ಆದೇಶಕ್ಕೆ ಲಗತ್ತಿಸಿದ ನಮೂನೆ–1 ರಲ್ಲಿ ಪಡೆಯತಕ್ಕದ್ದು.

6. ಸರ್ಕಾರಿ ಅಧಿಸೂಚನೆ ಸಂಖ್ಯೆ. ಸಿಆಸುಇ/71/ಸೆನೆನಿ/2001 ದಿನಾಂಕ: 24.10.2002 ರನ್ವಯ ಶೇಕಡಾ 5% ರಷ್ಟು ಹುದ್ದೆಗಳನ್ನು (18 ಹುದ್ದೆಗಳು) ಒಂದನೇ ತರಗತಿಯಿಂದ 10 ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ಓದಿರುವ ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುವುದು. ಇದಕ್ಕೆ ಆಧಾರವಾಗಿ ಕ್ಯುಮ್ಯುಲೇಟೀವ್ ರೆಕಾರ್ಡ್‌ನ ಪ್ರಮಾಣೀಕೃತ ಉಧೃತಾ ಭಾಗವನ್ನು ಲಗತ್ತಿಸುವುದು.

7. ಈ ಅಧಿಸೂಚನೆಯನ್ವಯ ಆಯ್ಕೆಯಾಗುವ ಅಭ್ಯರ್ಥಿಗಳು ರಾಜ್ಯದ ಯಾವುದೇ ಭಾಗದಲ್ಲಿ ಸೇವೆ ಸಲ್ಲಿಸಲು ಬದ್ಧರಾಗಿರತಕ್ಕದ್ದು.

8. ಅರ್ಜಿಯೊಂದಿಗೆ ಲಗತ್ತಿಸಬೇಕಾದ ದೃಢೀಕೃತ ಜೆರಾಕ್ಸ್ ದಾಖಲಾತಿಗಳು:–

(i) (ಎ) ಬಿ.ವಿ.ಎಸ್‌ಸಿ./ಬಿ.ವಿ.ಎಸ್‌ಸಿ ಅಂಡ್ ಎಹೆಚ್ ಪದವಿಯ ಎಲ್ಲಾ ವರ್ಷಗಳ (ಸೆಮಿಸ್ಟರ್) ಅಂಕಪಟ್ಟಿಗಳು

(ಬಿ) ಸಂಬಂಧಪಟ್ಟ ವಿಶ್ವ ವಿದ್ಯಾನಿಲಯ ನೀಡಿರುವ ತ್ರೈಮಾಸಿಕ ಪದ್ದತಿಯ ಅಂಕಪಟ್ಟಿಯ ಪರಿವರ್ತಕ ಕೋಷ್ಠಕ ಪ್ರಮಾಣ ಪತ್ರ (ಸರ್ಟಿಫಿಕೇಟ್‌ಗಳು)

(Trimester system's Marks card conversion certificate issued by the concerned University

(ii) ಚಾಲ್ತಿಯಲ್ಲಿರುವ ಪಶುವೈದ್ಯಕೀಯ ಪರಿಷತ್ತಿನ ನೋಂದಣಿ ಪ್ರಮಾಣ ಪತ್ರ

(iii) ಘಟಿಕೋತ್ಸವ ಪದವಿ ಪ್ರಮಾಣ ಪತ್ರ (ಈಗಾಗಲೇ ಪಡೆದಿದ್ದಲ್ಲಿ ಮಾತ್ರ)

(iv) ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪ್ರಮಾಣ ಪತ್ರ / ವರ್ಗಾವಣೆ ಪ್ರಮಾಣ ಪತ್ರ / ಕ್ಯುಮ್ಯುಲೆಟೀವ್ ರೆಕಾರ್ಡ್‌ನ ಪ್ರಮಾಣೀಕೃತ ಉಧೃತಾ ಭಾಗ

(v) ಅರ್ಜಿಯೊಂದಿಗೆ ಜಂಟಿ ನಿರ್ದೇಶಕರು (ಆಡಳಿತ) ಪದನಿಮಿತ್ತ ಸದಸ್ಯ ಕಾರ್ಯದರ್ಶಿ, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ ನಿರ್ದೇಶನಾಲಯ, ಬೆಂಗಳೂರು ರವರ ಹೆಸರಿಗೆ ಪಡೆದ ರೂ. 100/– **(ರೂ. ನೂರು ಮಾತ್ರ)** ಹಾಗೂ ಪ.ಜಾ., ಪ.ಪಂ., ಪ್ರವರ್ಗ– I ರವರು ರೂ. 50/– **(ರೂ. ಐವತ್ತು ಮಾತ್ರ)** ರ ಮೌಲ್ಯದ ಕ್ರಾಸ್ ಮಾಡಿದ ಇಂಡಿಯನ್ ಪೋಸ್ಟಲ್ ಆರ್ಡರ್ / ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದ ಡಿ.ಡಿ. ಮೂಲಕ ನಿಗಧಿತ ಶುಲ್ಕವನ್ನು ಸಂದಾಯ ಮಾಡತಕ್ಕದ್ದು. ಇಲ್ಲವಾದಲ್ಲಿ ಅಂತಹ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

(vi) ಸೈನಿಕ ಸೇವೆಯಿಂದ ಬಿಡುಗಡೆಯಾದ / ಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರ (ಮಾಜಿ ಸೈನಿಕ ಮೀಸಲಾತಿ ಕೋರಿದ್ದಲ್ಲಿ).

(vii) ಪ.ಜಾ., ಪ.ಪಂ., ಪ್ರವರ್ಗ– I, ಪ್ರವರ್ಗ II ಎ, ಪ್ರವರ್ಗ II ಬಿ, ಪ್ರವರ್ಗ III ಎ, ಮತ್ತು ಪ್ರವರ್ಗ III ಬಿ ಮೀಸಲಾತಿ ಕೋರಿದ್ದಲ್ಲಿ ಸಂಬಂಧಿತ ಪ್ರಮಾಣ ಪತ್ರಗಳನ್ನು ಲಗತ್ತಿಸುವುದು.

(viii) ಕನ್ನಡ ಮಾಧ್ಯಮ/ಗ್ರಾಮೀಣ ಅಭ್ಯರ್ಥಿ ಮೀಸಲಾತಿ ಬಯಸುವವರು ಅವಶ್ಯ ದಾಖಲಾತಿ ಒದಗಿಸುವುದು.

(ix) ಇಬ್ಬರು ಗಣ್ಯ ವ್ಯಕ್ತಿಗಳಿಂದ ಪಡೆದ ಗುಣ ಮತ್ತು ನಡತೆ ಪ್ರಮಾಣ ಪತ್ರಗಳು ದ್ವಿಪ್ರತಿಗಳಲ್ಲಿ

(x) ಅರ್ಜಿಯಲ್ಲಿ ಇತ್ತೀಚಿನ ಪಾಸ್ ಪೋರ್ಟ್ ಸೈಜಿನ ಎರಡು ಭಾವಚಿತ್ರಗಳನ್ನು ಅಂಟಿಸಿರಬೇಕು.

9. ಅಭ್ಯರ್ಥಿಗಳು ಭರ್ತಿಮಾಡಿದ ಅರ್ಜಿಗಳನ್ನು ಎಲ್ಲಾ ಸಂಬಂಧಿಸಿದ ದಾಖಲಾತಿಗಳು / ಅಂಕಪಟ್ಟಿಗಳ ದ್ವಿಪ್ರತಿಗಳೊಂದಿಗೆ ಖುದ್ದಾಗಿ ಅಥವಾ ನೋಂದಣಿ ಅಂಚೆ ಮುಖಾಂತರ **ದಿನಾಂಕ: 07.05.2010 ರ ಸಂಜೆ 5.30 ಘಂಟೆಯೊಳಗೆ** "ಸದಸ್ಯ ಕಾರ್ಯದರ್ಶಿಗಳು, ಇಲಾಖಾ ಆಯ್ಕೆ ಸಮಿತಿ, ಪಶುಸಂಗೋಪನೆ ಮತ್ತು ಪಶುವೈದ್ಯ ಸೇವಾ ಇಲಾಖೆ, ಆಯುಕ್ತರವರ ಕಾರ್ಯಾಲಯ, 2ನೇ ಮಹಡಿ, ಸರ್.ಎಂ. ವಿಶ್ವೇಶ್ವರಾಯ ಚಿಕ್ಕ ಗೋಪುರ, ಡಾ: ಬಿ.ಆರ್. ಅಂಬೇಡ್ಕರ್ ವೀದಿ, ಬೆಂಗಳೂರು–560 001" ಇವರಿಗೆ ತಲುಪುವಂತೆ ಸಲ್ಲಿಸತಕ್ಕದ್ದು. ಯಾವುದೇ ಕಾರಣದಿಂದಾಗಿ ಅರ್ಜಿಯು ಇಲಾಖೆಗೆ ತಡವಾಗಿ ತಲುಪಿದ್ದಕ್ಕಾಗಿ ಅಥವಾ ಅರ್ಜಿಯು ತಲುಪದೇ ಇರುವುದಕ್ಕೆ ಆಯ್ಕೆ ಪ್ರಾಧಿಕಾರವು ಜವಾಬ್ದಾರಿಯಾಗಿರುವುದಿಲ್ಲ. ನಿಗಧಿತ ದಿನಾಂಕ ಮುಗಿದ ನಂತರ ಸಲ್ಲಿಸಿದ ಮೇಲ್ಕಂಡ ಅವಶ್ಯಕ ದಾಖಲೆಗಳನ್ನು ಅರ್ಜಿಯೊಂದಿಗೆ ಲಗತ್ತಿಸದ ಮತ್ತು ಅರ್ಜಿಯ ನಿಗಧಿತ ಅಂಕಣಗಳಲ್ಲಿ ಸಹಿ ಮಾಡದಿರುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು. ಅರ್ಜಿಗಳನ್ನು ಸ್ವೀಕರಿಸಲು ನಿಗಧಿಪಡಿಸಿದ ದಿನಾಂಕವು ಬಂದ್/ಮುಷ್ಕರ ರಜೆಯಾಗಿದ್ದಲ್ಲಿ ಮಾರನೆಯ ದಿನವು ಕೊನೆಯ ದಿನಾಂಕವಾಗಿರುತ್ತದೆ.

10. ಅರ್ಜಿಗಳನ್ನೊಳಗೊಂಡ ಲಕೋಟೆಯ ಮೇಲೆ **"ಪಶುವೈದ್ಯಾಧಿಕಾರಿಗಳ ಹುದ್ದೆಗೆ ಅರ್ಜಿ"**ಎಂದು ದಪ್ಪ ಅಕ್ಷರಗಳಲ್ಲಿ ಬರೆಯತಕ್ಕದ್ದು. ಖುದ್ದಾಗಿ ಅರ್ಜಿಗಳನ್ನು ಸಲ್ಲಿಸುವ ಅಭ್ಯರ್ಥಿಗಳು ಸ್ವೀಕೃತಿ ಪಡೆಯತಕ್ಕದ್ದು.

11. ಈ ಪ್ರಕಟಣೆ ಹಾಗೂ ಅರ್ಜಿ ನಮೂನೆಯ ಕುರಿತು ಏನಾದರೂ ವಿವರಣೆ ಬೇಕಾದಲ್ಲಿ ಆಯುಕ್ತರ ಕಛೇರಿಯ ಸಿಬ್ಬಂದಿ ಶಾಖೆ ಅಧೀಕ್ಷಕರು–1 ಇವರನ್ನು ಸಂಪರ್ಕಿಸಬಹುದು. ದೂರವಾಣಿ ಸಂಖ್ಯೆ. 22864441

ಆಯುಕ್ತರು
ಪದನಿಮಿತ್ತ ಇಲಾಖಾ ಆಯ್ಕೆ ಸಮಿತಿ ಅಧ್ಯಕ್ಷರು
ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು–560 001

**Office of the Commissioner, Animal Husbandry & Veterinary Services, 2nd Floor,**
**Sir. M. Vishveshwaraya Mini Tower, Dr. B.R. Ambedkar Veedhi, Bangalore – 560 001**
**ಆಯುಕ್ತರವರ ಕಾರ್ಯಾಲಯ, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, 2ನೇ ಮಹಡಿ,**
**ಸರ್.ಎಂ. ವಿಶ್ವೇಶ್ವರಯ್ಯ ಚಿಕ್ಕ ಗೋಪುರ, ಡಾ: ಬಿ.ಆರ್. ಅಂಬೇಡ್ಕರ್ ರಸ್ತೆ, ಬೆಂಗಳೂರು – 560 001**

## APPLICATION FOR DIRECT RECRUITMENT FOR VETERINARY OFFICERS IN THE DEPARTMENT OF ANIMAL HUSBANDRY & VETERINARY SERVICES

## ನೇರ ನೇಮಕಾತಿಗಾಗಿ ಅರ್ಜಿ ನಮೂನೆ

Paste your recent passport size photograph duly signed within this box only (Do not pin or staple) (Please affix your signature in the box below

**ವಿ.ಸೂ:** 1. ದಯವಿಟ್ಟು ದಿನಾಂಕ: ____________ ರ ಕರ್ನಾಟಕ ರಾಜ್ಯ ಪತ್ರದ ವಿಶೇಷ ಪತ್ರಿಕೆಯನ್ನು ಓದಲು ತಿಳಿಸಿದೆ.

2. ಅರ್ಜಿಯೊಂದಿಗೆ ನೀಡಿರುವ ತಾಳೆಪಟ್ಟಿಯಲ್ಲಿದ್ದಂತೆ ದಾಖಲಾತಿಗಳನ್ನು ಲಗತ್ತಿಸುವುದು.

3. ಗಣಕೀಕರಿಸುವುದರಿಂದ ಅರ್ಜಿಯನ್ನು ಮಡಚುವುದು, ಕೊಳೆ ಮಾಡುವುದನ್ನು ತಪ್ಪಿಸಿ.

NOTIFICATION NO. & DATE: ________________________________

ಅಧಿಸೂಚನೆ ಸಂಖ್ಯೆ ಮತ್ತು ದಿನಾಂಕ: ________________________________

POST APPLIED FOR ________________________________

(indicate here the post and department)

ಅರ್ಜಿ ಹಾಕಿದ ಹುದ್ದೆ ಮತ್ತು ಇಲಾಖೆಯ ಹೆಸರು : ________________________

1. Name : (In capitals as in SSLC or X standard marks card)
ಅಭ್ಯರ್ಥಿಯ ಹೆಸರು (ದಪ್ಪ ಅಕ್ಷರಗಳಲ್ಲಿ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರದಲ್ಲಿ ನಮೂದಿಸಿರುವಂತೆ).

2. Father's name / Husband's Name (Strikeout whichever is not applicable)
ತಂದೆಯವರ / ಪತಿಯ ಹೆಸರು : (ಅನ್ವಹಿಸದಿರುವುದನ್ನು ಹೊಡೆದುಹಾಕಿ)

3. Postal address : (In capitals)
ಅಂಚೆ ವಿಳಾಸ (ದಪ್ಪ ಅಕ್ಷರಗಳಲ್ಲಿ)

| | |
|---|---|
| PHONE NO. | PIN CODE |

4. Permanent address: (In capitals)
ಖಾಯಂ ವಿಳಾಸ (ದಪ್ಪ ಅಕ್ಷರಗಳಲ್ಲಿ)

PHONE NO. PIN CODE

5. Details of IPO/D.D. enclosed:
ನಿಗಧಿತ ಶುಲ್ಕ ಪಾವತಿಸಿದ ಐ.ಪಿ.ಒ. ಅಥವಾ ಡಿ.ಡಿ.ಯ ವಿವರ:

| Name & address of the Post Office/Bank<br>ಅಂಚೆ ಕಛೇರಿ/ಬ್ಯಾಂಕಿನ ವಿಳಾಸ | Number and date of postal order/demand draft<br>ಡಿ.ಡಿ./ಐ.ಪಿ.ಒ. ಸಂಖ್ಯೆ ಮತ್ತು ದಿನಾಂಕ | Amount<br>ಮೊತ್ತ |
|---|---|---|
| | | |

6. Date of birth: (As in SSLC or equivalent examination certificate)
ಜನ್ಮ ದಿನಾಂಕ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆ ಪ್ರಮಾಣ ಪತ್ರದಲ್ಲಿ ನಮೂದಿಸಿರುವಂತೆ)

Day ದಿನ | Month ತಿಂಗಳು | Year ವರ್ಷ | Age* ವಯಸ್ಸು*

*In case you claim age relaxation, mention the relevant provisions for details see the Notification.

7. Gender : Write 'M' for Male 'F' for Female
ಲಿಂಗ : ಸ್ತ್ರೀ / ಪುರುಷ ಎಂಬುದು ನಮೂದಿಸುವುದು.

8. Reservation claimed:
ಕೋರಿರುವ ಮೀಸಲಾತಿ : ಸಂಬಂಧಪಟ್ಟ ಮೀಸಲಾತಿಯನ್ನು ನಮೂದಿಸುವುದು.

(a) Indicate your Reservation : Category: 1, 2A, 2B, 3A, 3B, SC, ST, GM
ಪ್ರ.ವ.1, 2ಎ, 2ಬಿ, 3ಎ, 3ಬಿ, ಎಸ್.ಸಿ., ಎಸ್.ಟಿ., ಸಾ.ಅ.

(b) Sub caste
ಉಪ ಜಾತಿ

9. Do you come under following reservation:
ಕೆಳಕಂಡ ಮೀಸಲಾತಿ ಸೌಲಭ್ಯ ಬಯಸುವ ಅಭ್ಯರ್ಥಿಯೇ?

Rural ಗ್ರಾ.ಅ | KMS ಕಮಾಅ | Ex-MP ಮಾಸೈ | WR ಮ.ಅ

10. Do you possess the prescribed educational qualification, if so, furnish the details below:-

ನಿಗಧಿತ ಶೈಕ್ಷಣಿಕ ವಿದ್ಯಾರ್ಹತೆಯ ವಿವರಗಳು:–

| Qualification<br>ವಿದ್ಯಾರ್ಹತೆ | Overall percentage of marks (all the years/Semesters)<br>ತ್ರೈಮಾಸಿಕ ಪದ್ಧತಿಯ ಪರಿವರ್ತಕ ಕೋಷ್ಟಕದನ್ವಯ ಗಳಿಸಿದ ಅಂಕಗಳು | Year of passing<br>ತೇರ್ಗಡೆ ಹೊಂದಿದ ವರ್ಷ | University/Board<br>ಸಂಬಂಧಪಟ್ಟ ವಿಶ್ವವಿದ್ಯಾನಿಲಯ |
|---|---|---|---|
| | | | |

11. Have you registered with Veterinary Council / Reg. No. & Date

ಪಶುವೈದ್ಯಕೀಯ ಪರಿಷತ್‌ನಲ್ಲಿ ನೊಂದಾಯಿಸಲಾಗಿದೆಯೇ? / ನೊಂದಣೀ ಸಂ. ಮತ್ತು ದಿನಾಂಕ

| No. | Yes | No |
|---|---|---|
| ಸಂಖ್ಯೆ. | ಹೌದು | ಇಲ್ಲ |

12. Do you know Kannada language?

ಕನ್ನಡ ಭಾಷೆ ಅರಿತಿರುವಿರಾ?

If Yes

ಹೌದಾದರೆ

| Yes | No |
|---|---|
| ಹೌದು | ಇಲ್ಲ |
| Read | Write |
| ಓದಲು | ಬರೆಯಲು |

## ನಮೂನೆ – 1

## ಜನರಲ್ ಮೆರಿಟ್ ಅಭ್ಯರ್ಥಿಗಳು ಮೇಲುಸ್ತರಕ್ಕೆ ಸೇರಿಲ್ಲವೆಂದು, ದೃಢೀಕರಿಸಿ ಗ್ರಾಮೀಣ ಮೀಸಲಾತಿಯನ್ನು ಕೋರಲು ಸಲ್ಲಿಸಬೇಕಾದ ಪ್ರಮಾಣ ಪತ್ರ.

## (ಜನರಲ್ ಮೆರಿಟ್ ಅಭ್ಯರ್ಥಿಗಳು ಭರ್ತಿಮಾಡಬೇಕಾದ ನಮೂನೆ)

ಗೆ:

ತಹಸೀಲ್ದಾರ್‌ರವರಿಗೆ

------------------- ತಾಲ್ಲೂಕು

------------------ ಜಿಲ್ಲೆ

ಮಾನ್ಯರೇ,

ಶ್ರೀ/ಶ್ರೀಮತಿ ----------------------------------- ಎಂಬುವವರ ಮಗ / ಮಗಳು / ಪತಿ / ಪತ್ನಿ ----------------------------------------- ಆದ ನಾನು ಮೇಲುಸ್ತರದಲ್ಲಿ (creamy layer) ಬರುವುದಿಲ್ಲವೆಂದು ನೇರ ನೇಮಕಾತಿಯಲ್ಲಿ ಗ್ರಾಮೀಣ ಅಭ್ಯರ್ಥಿ ಮಿಸಲಾತಿಯನ್ನು ಪಡೆಯುವುದಕ್ಕಾಗಿ ಪ್ರಮಾಣ ಪತ್ರವನ್ನು ಪಡೆಯಲು ತಮ್ಮಲ್ಲಿ ಈ ಕೆಳಕಂಡ ಮಾಹಿತಿಗಳನ್ನು ಒದಗಿಸುತ್ತ ಕೋರುತ್ತೇನೆ.

1. ಅಭ್ಯರ್ಥಿಯ ಹೆಸರು ಮತ್ತು ಉದ್ಯೋಗ :
2. ಅಭ್ಯರ್ಥಿಯ ಸ್ವಂತ ಸ್ಥಳ : ಗ್ರಾಮ :
   ತಾಲ್ಲೂಕು :
   ಜಿಲ್ಲೆ :
3. ಅಭ್ಯರ್ಥಿಯು ಹುಟ್ಟಿದ ದಿನಾಂಕ ವಯಸ್ಸು ಮತ್ತು ಹುಟ್ಟಿದ ಸ್ಥಳ :
4. ಅಭ್ಯರ್ಥಿಯ ತಂದೆ/ತಾಯಿ/ಪೋಷಕರ/ಪತಿ/ಪತ್ನಿ ಹೆಸರು ಮತ್ತು ಉದ್ಯೋಗ
   ಉದ್ಯೋಗವು ಸರ್ಕಾರಿ: ಅರೆ ಸರ್ಕಾರಿ :
   ಸಾರ್ವಜನಿಕ ಉದ್ದಿಮೆ :
   ಖಾಸಗಿ :

5. ಅಭ್ಯರ್ಥಿಯ ಪ್ರಸ್ತುತ ವಿಳಾಸ (ಸ್ಪಷ್ಟವಾಗಿ ನಮೂದಿಸುವುದು) :

6. ಅಭ್ಯರ್ಥಿಯ ಖಾಯಂ ಅಂಚೆ ವಿಳಾಸ :

7. ಅಭ್ಯರ್ಥಿಯ ಶಾಲಾ ಶಿಕ್ಷಣದ ವ್ಯಾಸಂಗ ಮಾಡಿದ ಶಾಲೆಗಳ ವಿವರಗಳು

ಪ್ರಾಥಮಿಕ :

ಮಾಧ್ಯಮಿಕ :

ಪ್ರೌಢ :

8. ಅಭ್ಯರ್ಥಿಯ ಹಾಗೂ ಅಭ್ಯರ್ಥಿಯ ತಂದೆ/ತಾಯಿ/ಪೋಷಕರ (ತಂದೆ/ತಾಯಿ ಜೀವಂತರಾಗಿರದಿದ್ದಲ್ಲಿ) ಪತಿ/ಪತ್ನಿ ಇವರ ಒಟ್ಟು ವಾರ್ಷಿಕ ಆದಾಯ ಎಲ್ಲ ಮೂಲಗಳಿಂದ :

1. ವೇತನ (ವೇತನ ಶ್ರೇಣಿ) :

2. ಜಮೀನಿನ ವಿವರಗಳು :

3. ಇತರೆ ಮೂಲಗಳಿಂದ :

9. ಆದಾಯ ತೆರಿಗೆ ಪಾವತಿದಾರರೆ? :

10. ಸಂಪತ್ತು ತೆರಿಗೆ ಪಾವತಿದಾರರೆ? ;

11. ಮಾರಾಟ ತೆರಿಗೆ ಪಾವತಿದಾರರೆ? :

**ಪ್ರಮಾಣೀಕೃತ ಘೋಷಣೆ**

ಈ ಮೇಲೆ ನನ್ನಿಂದ ಒದಗಿಸಲಾದ ಮಾಹಿತಿಗಳು ನನಗೆ ತಿಳಿದ ಮಟ್ಟಿಗೆ ಸತ್ಯವೆಂದು ಈ ಮೂಲಕ ಪ್ರಮಾಣೀಕರಿಸಿ ಘೋಷಿಸುತ್ತೇನೆ.

ಸ್ಥಳ : ತಮ್ಮ ವಿಧೇಯ

ದಿನಾಂಕ:

(ಅಭ್ಯರ್ಥಿಯ ಸಹಿ)

ಮೇಲೆ ಒದಗಿಸಲಾದ ಮಾಹಿತಿಗಳು ಸತ್ಯವಾಗಿರುತ್ತದೆ ಎಂದು ಪ್ರಮಾಣೀಕರಿಸುತ್ತಾ, ಈ ಮಾಹಿತಿಗಳು ಅಸತ್ಯವೆಂದು ದೃಢಪಟ್ಟಲ್ಲಿ ಅಪರಾಧ ವಿಚಾರಣೆಗೆ ಬದ್ಧನಾಗಿರುತ್ತೇನೆ.

ತಂದೆ/ತಾಯಿ ಪೋಷಕರ ಸರಿ

(ತಂದೆ/ತಾಯಿ ಜೀವಂತವಾಗಿರದಿದ್ದಲ್ಲಿ)

ಪತಿ /ಪತ್ನಿ ಇವರ ಸಹಿ

**ಇಬ್ಬರು ಸ್ಥಳೀಯ ಸಾಕ್ಷಿಗಳು**

ಅಭ್ಯರ್ಥಿಯ ಮತ್ತು ತಂದೆ/ತಾಯಿ/ಪೋಷಕರ/ಪತಿ/ಪತ್ನಿ ಇವರನ್ನು ಹಾಗೂ ಇವರ ಸಹಿಯನ್ನು ನಾವು ಗುರುತಿಸುತ್ತೇವೆ:

ಸಾಕ್ಷಿಗಳ ಸಹಿ 1.

(ಪೂರ್ಣ ವಿಳಾಸದೊಂದಿಗೆ)

2.

**ಪರಿಶೀಲನಾ ಪ್ರಮಾಣ ಪತ್ರ**

1. ಶ್ರೀ/ಶ್ರೀಮತಿ : ______________________________ ಇವರ ಮಗ/ಮಗಳು/ಪತಿ/ಪತ್ನಿ ______________________________ ಶ್ರೀ/ಶ್ರೀಮತಿ/______________________________ ಕುಮಾರಿ ______________________________ ಎಂಬುವವರು ಕರ್ನಾಟಕ ರಾಜ್ಯದ ______________ಜಿಲ್ಲೆಯ ವಿಭಾಗ__________________ ಗ್ರಾಮ/ಪಟ್ಟಣ/ ನಗರದಲ್ಲಿ ಸಾಮಾನ್ಯ ನಿವಾಸಿಯಾಗಿದ್ದಾರೆಂದು ಮತ್ತು ಇವರು ಜನರಲ್ ಮೆರಿಟ್ ವರ್ಗಕ್ಕೆ ಸೇರಿದವರಾಗಿರುತ್ತಾರೆ.

2. ಶ್ರೀ/ಶ್ರೀಮತಿ/ಕುಮಾರಿ: ______________________________ ಇವರ ಪೋಷಕರು ಇವರು ಸರ್ಕಾರಿ ಆದೇಶ ಸಂಖ್ಯೆ ಎಸ್‌ಡಬ್ಲ್ಯೂಡಿ 251 ಬಿಸಿಎ 94, ಬೆಂಗಳೂರು, ದಿನಾಂಕ: 31.01.1995 ರನ್ವಯ ಜನರಲ್ ಮೆರಿಟ್ ವರ್ಗದ ಮೇಲುಸ್ತರದಲ್ಲಿ (creamy layer) ಬರುವುದಿಲ್ಲವೆಂದು ಪ್ರಮಾಣೀಕರಿಸಲಾಗಿದೆ.

ಸ್ಥಳ : ತಹಸೀಲ್ದಾರ್

ದಿನಾಂಕ: ___________ ತಾಲ್ಲೂಕು

**ಸೂಚನೆ–1**

ಇದರಲ್ಲಿ ಉಪಯೋಗಿಸಲಾಗಿರುವ "ಸಾಮಾನ್ಯ ನಿವಾಸಿ" ಎಂಬ ಪದವು 1950ರ ಜನತಾ ಪ್ರಾತಿನಿಧ್ಯ ಕಾಯಿದೆಯ 20ನೇ ಅನುಚ್ಛೇದದಲ್ಲಿನ ಅರ್ಥವನ್ನು ಹೊಂದಿರುತ್ತದೆ.

**ಸೂಚನೆ–1**

ಪರಿಶೀಲನಾ ಪ್ರಮಾಣ ಪತ್ರ ನೀಡುವ ಅಧಿಕೃತ ಅಧಿಕಾರಿಯು ಸರ್ಕಾರಿ ಆದೇಶ ಸಂಖ್ಯೆ. ಎಸ್‌ಡಬ್ಲ್ಯೂಡಿ 251 ಬಿಸಿಎ 95, ಬೆಂಗಳೂರು ದಿನಾಂಕ: 31.01.1995 ರನ್ವಯ ಮೇಲುಸ್ತರದವರನ್ನು ಗುರುತಿಸಲು ನಿಗಧಿಪಡಿಸಲಾಗಿರುವ ಅಂಶಗಳನ್ನು ವಿವರವಾಗಿ ಖಚಿತಪಡಿಸಿಕೊಂಡ ನಂತರವೇ ಪ್ರಮಾಣ ಪತ್ರ ನೀಡತಕ್ಕದ್ದು.

**ನಮೂನೆ – 2**

**ಗ್ರಾಮೀಣ ಅಭ್ಯರ್ಥಿ ಪ್ರಮಾಣ ಪತ್ರ**

ಶ್ರೀ/ಶ್ರೀಮತಿ ______________________________ ರವರ ಮಗ/ಮಗಳು/ಪತಿ/ಪತ್ನಿ, ಶ್ರೀ/ಶ್ರೀಮತಿ/ಕುಮಾರಿ: ________________________ ಜಿಲ್ಲೆ ______________ ತಾಲ್ಲೂಕು ______________ ಗ್ರಾಮದಲ್ಲಿ ___________________ ವಾಸವಾಗಿರುವ ಇವರು ಒಂದನೇ ತರಗತಿಯಿಂದ ____________ ತರಗತಿಯವರೆಗೆ ____________ ಜಿಲ್ಲೆ ________________ ತಾಲ್ಲೂಕು __________________ ಪಟ್ಟಣ ಶಾಲೆಯಲ್ಲಿ ವ್ಯಾಸಂಗ ಮಾಡಿ ___________ ವರ್ಷ ನಡೆದ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುತ್ತಾರೆ. ಈ ಶಾಲೆಯು ಅಭ್ಯರ್ಥಿಯು ವ್ಯಾಸಂಗ ಮಾಡಿದ ಅವಧಿಯಲ್ಲಿ ಕರ್ನಾಟಕದ ಪೌರ–ನಿಗಮಗಳ ಅಧಿನಿಯಮ, 1976 ಅಥವಾ ಕರ್ನಾಟಕ ಪೌರಸಭೆಗಳ ಅಧಿನಿಯಮ, 1964ರ ಅಡಿಯಲ್ಲಿ ನಿರ್ದಿಷ್ಟಪಡಿಸಿದ ಒಂದು ದೊಡ್ಡ ನಗರಪ್ರದೇಶ, ಸಣ್ಣ ನಗರ ಪ್ರದೇಶ ಅಥವಾ ಪರಿವರ್ತನೆ ಹಂತದಲ್ಲಿರುವ ಪ್ರದೇಶಗಳ ಹೊರತಾದ ಪ್ರದೇಶದಲ್ಲಿತ್ತು.

(ಸಹಿ)

ಮುಖ್ಯೋಪಾಧ್ಯಾಯರು

ಮೇಲುರುಜು

ಕ್ಷೇತ್ರ ಶಿಕ್ಷಣಾಧಿಕಾರಿ

**ಕನ್ನಡ ಮಾಧ್ಯಮ ವ್ಯಾಸಂಗ ಪ್ರಮಾಣ ಪತ್ರ**

ಶ್ರೀ / ಶ್ರೀಮತಿ ______________________________ ರವರ ಮಗ / ಮಗಳು / ಪತ್ನಿ ಶ್ರೀ/ ಶ್ರೀಮತಿ / ಕುಮಾರಿ: ________________________ ಜಿಲ್ಲೆ ___________ ತಾಲ್ಲೂಕು ______________ ಗ್ರಾಮದಲ್ಲಿ ___________________ ವಾಸವಾಗಿರುವ ಇವರು ___________________ ತರಗತಿಯಿಂದ ______________________________ ತರಗತಿಯವರೆಗೆ ___________________ ಶೈಕ್ಷಣಿಕ ವರ್ಷದಿಂದ ______________ ಶೈಕ್ಷಣಿಕ ವರ್ಷದವರೆಗೆ ______________________________ ಶಾಲೆಯಲ್ಲಿ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುತ್ತಾರೆಂದು ಪ್ರಮಾಣೀಕರಿಸಲಾಗಿದೆ.

ದಿನಾಂಕ: ___________ ಮುಖ್ಯೋಪಾಧ್ಯಾಯರ ಸಹಿ ಮತ್ತು ಸಂಸ್ಥೆಯ ಮೊಹರು

ಸ್ಥಳ : ___________

**ಸೂಚನೆ:** ಅಭ್ಯರ್ಥಿಗಳು ಒಂದಕ್ಕಿಂತ ಹೆಚ್ಚಿನ ಶಾಲೆಗಳಲ್ಲಿ ವ್ಯಾಸಂಗ ಮಾಡಿದ್ದಲ್ಲಿ ಶಾಲಾವಾರು ಪ್ರತ್ಯೇಕ ಕನ್ನಡ ಮಾಧ್ಯಮ ವ್ಯಾಸಂಗ ಪ್ರಮಾಣ ಪತ್ರ ಸಲ್ಲಿಸಬೇಕು,

**DECLARATION**

**ಘೋಷಣೆ**

1. I hereby declare that all contents made in this application are true, complete and correct to the best of my knowledge and belief. In the event of any information being found false or ineligibility being detected before or after the selection action can be taken against me by the selection committee/Government under rule 20 of the Karnataka Civil Services (General Recruitment) rules 1977 as amended from time to time.

   ನಾನು ಈ ಅರ್ಜಿಯಲ್ಲಿ ನಮೂದಿಸಿರುವ ಎಲ್ಲ ಹೇಳಿಕೆ/ಮಾಹಿತಿಗಳು ಸತ್ಯವಾಗಿರುತ್ತೆ ಎಂದು ಹಾಗೂ ಸರಿಯಾಗಿರುತ್ತದೆ ಎಂದು ಘೋಷಿಸುತ್ತೇನೆ. ಈ ಮೇಲೆ ತಿಳಿಸಿದ ಯಾವುದೇ ಮಾಹಿತಿಗಳು ಸರಿಯಾಗಿಲ್ಲವೆಂದು ಆಯ್ಕೆ ಪೂರ್ವದಲ್ಲಾಗಲೀ ಅಥವಾ ನಂತರದಲ್ಲಾಗಲೀ ಕಂಡುಬಂದಲ್ಲಿ ಕಾಲಕಾಲಕ್ಕೆ ತಿದ್ದುಪಡಿ ಮಾಡಲಾದ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ–20ರ ಅನ್ವಯ ಸರ್ಕಾರವು / ಆಯ್ಕೆ ಸಮಿತಿ ಕೈಗೊಳ್ಳುವ ಕ್ರಮಕ್ಕೆ ನಾನು ಬದ್ಧನಾಗಿರುತ್ತೆನೆ.

2. I have carefully read Rule 20 of Karnataka Civil Services (General Recruitment) Rules 1977. I have read all the other instructions carefully and abide them.

   ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿಗಳು 1977 ರ ನಿಯಮ–20 ಹಾಗೂ ಈ ಸಂಬಂಧದಲ್ಲಿ ನೀಡಿರುವ ಎಲ್ಲಾ ಸೂಚನೆಗಳನ್ನು ಜಾಗರೂಕತೆಯಿಂದ ಓದಿಕೊಂಡಿದ್ದು ಅವುಗಳಿಗೆ ನಾನು ಬದ್ಧನಾಗಿರುತ್ತೇನೆ.

3. I further declare that I fulfill all the eligibility conditions regarding age, educational qualifications, reservation claimed.

   ನಾನು ಹುದ್ದೆಗೆ ನಿಗಧಿಪಡಿಸಲಾದ ವಿದ್ಯಾರ್ಹತೆ, ವಯೋಮಿತಿ ಮತ್ತು ಕೋರಿದ ಮೀಸಲಾತಿ ಬಗ್ಗೆ ಇತ್ಯಾದಿ ಎಲ್ಲ ನಿಬಂಧನೆಗಳನ್ನು ಈಡೇರಿಸಿದ್ದೇನೆಂದು ಘೋಷಿಸುತ್ತೇನೆ.

4. I have submitted my application through the proper channel (applicable only to the Government servant)

   ಸಕ್ಷಮ ಪ್ರಾಧಿಕಾರದ ಮುಖಾಂತರ ಅರ್ಜಿ ಸಲ್ಲಿಸಿರುತ್ತೇನೆ. (ಸರ್ಕಾರಿ ನೌಕರರಿಗೆ ಮಾತ್ರ ಅನ್ವಹಿಸುವುದು)

Place: Signature of the Candidate

(Application not signed by the candidate will be rejected)

ಸ್ಥಳ ಅಭ್ಯರ್ಥಿಯ ಸಹಿ

(ಅಭ್ಯರ್ಥಿಯ ಸಹಿ ಇಲ್ಲದ ಅರ್ಜಿಯನ್ನು ತಿರಸ್ಕರಿಸಲಾಗುವುದು)

From:

____________________

____________________

____________________

____________________

Recruitment to the post of ________________________________________

(Indicate here the post and department)

**CHECK LIST**

Have you enclosed the copies of the following documents/certificates in duplicate. If Yes, please write the page number in the box provided hereunder

1. I.P.O. / D.D. of Rs. ________________________ [ ]

2. Application form

3. SSLC marks card/T.C./Extract of cumulative record (In support of age)

4. Certificates in respect of qualification prescribed for the post ______________________________

5. Caste/Caste and income certificate in support of reservation claimed

6. Discharge certificate/Release order in support of Ex-MP claimed

7. Rural candidate reservation certificates

8. ______________________________ (Any other certificates)

**Place:**

**Date:** **Signature of the Candidate**

**ACKNOWLEDGEMENT**

Acknowledged that the candidate has enclosed the copies of the above documents except Sl.Nos. ______________________________ (The legality, veracity and the correctness of documents furnished are subject to due verification).

Date:

Joint Director (Admn) & Ex-Officio
Member Secretary, Departmental Selection Committee
Office of the Director, Departmentof Animal Husbandry
& Veterinary Services, 2nd Floor, V.V. Mini Tower, Bangalore-1

ಪಿ.ಆರ್. 251

**ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ರಾಮನಗರ**

**ನೇಮಕಾತಿ ಪ್ರಕಟಣೆ**

**ಅಧಿಸೂಚನೆ ಸಂಖ್ಯೆ: ಎಡಿಎಂ.12/2010, ದಿನಾಂಕ: 9ನೇ ಏಪ್ರಿಲ್ 2010**

**ವಿಷಯ:** ಶೀಘ್ರಲಿಪಿಗಾರರು, ಬೆರಳಚ್ಚುಗಾರರು, ಬೆರಳಚ್ಚು–ನಕಲುಗಾರರು, ಪ್ರೋಸಸ್ ಜಾರಿಕಾರರು ಮತ್ತು ಜವಾನರ ಹುದ್ದೆಗೆ ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಬಗ್ಗೆ.

**ಉಲ್ಲೇಖ:**
1. ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ಪತ್ರದ ಸಂಖ್ಯೆ: ಎಲ್‌ಸಿಎ– II 205/2004. ದಿನಾಂಕ: 02.05.2008ರ ಅನ್ವಯ ಉಳಿದಿರುವ ಒಂದು ಶೀಘ್ರಲಿಪಿಗಾರರ (ಬ್ಯಾಕ್‌ಲಾಗ್) ಹುದ್ದೆಯನ್ನು ಭರ್ತಿ ಮಾಡಿಕೊಳ್ಳಲು.
2. ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ಪತ್ರದ ಸಂಖ್ಯೆ: ಎಲ್‌ಸಿಎ– II 164/2009. ದಿನಾಂಕ: 17.06.2009ರ ಅನ್ವಯ ಮತ್ತು ಸರ್ಕಾರಿ ಆದೇಶ ಸಂಖ್ಯೆ: ಲಾ 155 ಎಲ್‌ಎಸಿ 2009, ದಿನಾಂಕ 3.2.2010ರ ಅನ್ವಯ ಶೀಘ್ರಲಿಪಿಗಾರರು, ಬೆರಳಚ್ಚುಗಾರರು, ಬೆರಳಚ್ಚು–ನಕಲುಗಾರರು, ಪ್ರೋಸಸ್ ಜಾರಿಕಾರರು ಮತ್ತು ಜವಾನರ ಹುದ್ದೆಗೆ ಅಭ್ಯರ್ಥಿಗಳನ್ನು ಭರ್ತಿ ಮಾಡಿಕೊಳ್ಳಲು ಅನುಮತಿ ನೀಡಿರುತ್ತಾರೆ.
3. ಸರ್ಕಾರಿ ಆದೇಶ ಸಂಖ್ಯೆ: ಲಾ 09 ಎಲ್‌ಸಿಇ 2008, ಬೆಂಗಳೂರು, ದಿನಾಂಕ 06ನೇ ಮಾರ್ಚ್ 2008.
4. ಸರ್ಕಾರಿ ಆದೇಶ ಸಂಖ್ಯೆ: ಲಾ 144/ಎಲ್‌ಎಸಿ/2009, ದಿನಾಂಕ: 06.08.2009 ಮತ್ತು 02.11.2009.

ಮೇಲ್ಕಂಡ ಅಧಿಸೂಚನೆಯನ್ವಯ ರಾಮನಗರ ಜಿಲ್ಲಾ ನ್ಯಾಯಾಲಯ ಘಟಕದ ಅಧೀನ ನ್ಯಾಯಾಲಯಗಳಲ್ಲಿ ಖಾಲಿ ಇರುವ ಶೀಘ್ರಲಿಪಿಗಾರರು, ಬೆರಳಚ್ಚುಗಾರರು, ಬೆರಳಚ್ಚು ನಕಲುಗಾರರು, ಪ್ರೋಸಸ್ ಜಾರಿಕಾರರು ಮತ್ತು ಜವಾನರ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿದೆ. ನಿಗದಿ ಪಡಿಸಿದ ಅರ್ಜಿ ನಮೂನೆಯಲ್ಲಿ ಅಭ್ಯರ್ಥಿಗಳು ತಮ್ಮ ಸ್ವಂತ ಕೈಬರಹದಿಂದ ಎಲ್ಲಾ ಅಂಕಣಗಳನ್ನು ಜಾಗರೂಕತೆಯಿಂದ ಭರ್ತಿ ಮಾಡಿ **ದಿನಾಂಕ: 15.05.2010ರಂದು ಸಂಜೆ 4.00** ಗಂಟೆಯ ಒಳಗೆ ಸಲ್ಲಿಸತಕ್ಕದ್ದು.

**ಅರ್ಜಿಗಳನ್ನು ಸಲ್ಲಿಸಲು ನಿಗದಿ ಮಾಡಿದ ಕೊನೆಯ ದಿನಾಂಕ: 15.05.2010ರ ಶನಿವಾರ ಸಂಜೆ 4.00 ಗಂಟೆಯವರೆಗೆ**

**ಖಾಲಿ ಇರುವ ಹುದ್ದೆಗಳ ವರ್ಗೀಕರಣ**

**I. ಶೀಘ್ರಲಿಪಿಗಾರರ ಹುದ್ದೆ**

1. ಹುದ್ದೆಗಳ ಸಂಖ್ಯೆ : 5
2. ವೇತನ ಶ್ರೇಣಿ – 7275–175–7800–200–8600–225–9500–250–10500–300–12300–350–13350 ಹಾಗೂ ಲಭ್ಯವಿರುವ ಇತರೆ ಭತ್ಯೆಗಳು
3. ಹುದ್ದೆಗಳ ವರ್ಗೀಕರಣ :

| ವರ್ಗೀಕರಣ | ಇತರೆ | ಗ್ರಾಮೀಣ | ಮಹಿಳಾ | ಒಟ್ಟು |
|---|---|---|---|---|
| ಸಾಮಾನ್ಯ | – | 1 | 1 | 2 |
| ಪ್ರವರ್ಗ I | 1 | – | – | 1 |
| ಪ್ರವರ್ಗ II(ಎ) | 1 | – | – | 1 |
| ಪರಿಶಿಷ್ಟ ಪಂಗಡ (ಬ್ಯಾಕ್‌ಲಾಗ್) | 1 | – | – | 1 |
| **ಒಟ್ಟು** | **3** | **1** | **1** | **5** |

**4. ಶೈಕ್ಷಣಿಕ ವಿದ್ಯಾರ್ಹತೆ:**

ಎ) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ.

ಬಿ) ಕರ್ನಾಟಕ ಪ್ರೌಢ ಶಿಕ್ಷಣ ಮಂಡಳಿಯು ನಡೆಸುವ ಹಿರಿಯ ದರ್ಜೆಯ (Senior Grade) ಕನ್ನಡ ಮತ್ತು ಆಂಗ್ಲ ಭಾಷೆಗಳ ಬೆರಳಚ್ಚು ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ.

ಸಿ) ಕರ್ನಾಟಕ ಪ್ರೌಢ ಶಿಕ್ಷಣ ಮಂಡಳಿಯು ನಡೆಸುವ ಹಿರಿಯ (Senior Grade) ದರ್ಜೆಯ ಕನ್ನಡ ಮತ್ತು ಆಂಗ್ಲ ಭಾಷೆಗಳ ಶೀಘ್ರಲಿಪಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ.

**II. ಬೆರಳಚ್ಚುಗಾರರ ಹುದ್ದೆ**

1. ಹುದ್ದೆಗಳ ಸಂಖ್ಯೆ : 14
2. ವೇತನ ಶ್ರೇಣಿ – 5800–100–6000–125–6500–150–7100–175–7800–200–8600–225–9500––250–10500 ಹಾಗೂ ಲಭ್ಯವಿರುವ ಇತರೆ ಭತ್ಯೆಗಳು
3. ಹುದ್ದೆಗಳ ವರ್ಗೀಕರಣ :

| ವರ್ಗೀಕರಣ | ಇತರೆ | ಗ್ರಾಮೀಣ | ಮಹಿಳಾ | ಮಾಜಿ ಸೈನಿಕ | ಅಂ.ವಿಕಲ ದೃಷ್ಟಿಮಾಂದ್ಯ | ಒಟ್ಟು |
|---|---|---|---|---|---|---|
| ಸಾಮಾನ್ಯ | 2 | 2 | 2 | 1 | – | 7 |
| ಪ್ರವರ್ಗ II(ಎ) | – | 1 | 1 | – | 1 | 3 |
| ಪ್ರವರ್ಗ III(ಎ) | 1 | – | – | – | – | 1 |
| ಪ್ರವರ್ಗ III(ಬಿ) | 1 | – | – | – | – | 1 |
| ಪರಿಶಿಷ್ಟ ಜಾತಿ | – | 1 | – | – | 1 | 2 |
| **ಒಟ್ಟು** | **4** | **4** | **3** | **1** | **2** | **14** |

**ಸೂಚನೆ:** ಸೂಕ್ತ ದೃಷ್ಟಿಮಾಂದ್ಯ ಅಂಗವಿಕಲ ಅಭ್ಯರ್ಥಿಗಳು ಲಭ್ಯವಿಲ್ಲದಿದ್ದಲ್ಲಿ ಇತರೆ ಅಂಗವಿಕಲ ಅಭ್ಯರ್ಥಿಗಳನ್ನು ಪರಿಗಣಿಸಲಾಗುವುದು.

**4. ಶೈಕ್ಷಣಿಕ ವಿದ್ಯಾರ್ಹತೆ:**

ಎ) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ.

ಬಿ) ಕರ್ನಾಟಕ ಪ್ರೌಢ ಶಿಕ್ಷಣ ಮಂಡಳಿಯು ನಡೆಸುವ ಹಿರಿಯ ದರ್ಜೆಯ (Senior Grade) ಕನ್ನಡ ಮತ್ತು ಆಂಗ್ಲ ಭಾಷೆಗಳ ಬೆರಳಚ್ಚು ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ.

**III. ಬೆರಳಚ್ಚು–ನಕಲುಗಾರರ ಹುದ್ದೆ**

1. ಹುದ್ದೆಗಳ ಸಂಖ್ಯೆ : 1
2. ವೇತನ ಶ್ರೇಣಿ – 5800–100–6000–125–6500–150–7100–175–7800–200–8600–225–9500––250–10500 ಹಾಗೂ ಲಭ್ಯವಿರುವ ಇತರೆ ಭತ್ಯೆಗಳು
3. ಹುದ್ದೆಗಳ ವರ್ಗೀಕರಣ :

| ವರ್ಗೀಕರಣ | ಇತರೆ | ಗ್ರಾಮೀಣ | ಮಹಿಳಾ | ಮಾಜಿ ಸೈನಿಕ | ಒಟ್ಟು |
|---|---|---|---|---|---|
| ಸಾಮಾನ್ಯ | – | 1 | – | – | 1 |
| **ಒಟ್ಟು** | – | **1** | – | – | **1** |

**4. ಶೈಕ್ಷಣಿಕ ವಿದ್ಯಾರ್ಹತೆ:**

ಎ) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ.

ಬಿ) ಕರ್ನಾಟಕ ಪ್ರೌಢ ಶಿಕ್ಷಣ ಮಂಡಳಿಯು ನಡೆಸುವ ಕಿರಿಯ ದರ್ಜೆಯ (Junior Grade) ಕನ್ನಡ ಮತ್ತು ಆಂಗ್ಲ ಭಾಷೆಗಳ ಬೆರಳಚ್ಚು ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ.

**IV. ಪ್ರೊಸಸ್ ಜಾರಿಕಾರ ಹುದ್ದೆ:**

1. ಹುದ್ದೆಗಳ ಸಂಖ್ಯೆ : 7
2. ವೇತನ ಶ್ರೇಣಿ – 5500–100–6000–125–6500–150–7100–175–7800–200–8600–225–9500 ಹಾಗೂ ಲಭ್ಯವಿರುವ ಇತರೆ ಭತ್ಯೆಗಳು
3. ಹುದ್ದೆಗಳ ವರ್ಗೀಕರಣ :

| ವರ್ಗೀಕರಣ | ಇತರೆ | ಗ್ರಾಮೀಣ | ಮಹಿಳಾ | ಮಾಜಿ ಸೈನಿಕ | ಒಟ್ಟು |
|---|---|---|---|---|---|
| ಸಾಮಾನ್ಯ | 1 | 1 | 1 | 1 | 4 |
| ಪ್ರವರ್ಗ II(ಎ) | – | 1 | – | – | 1 |
| ಪ್ರವರ್ಗ III(ಎ) | 1 | – | – | – | 1 |
| ಪ್ರವರ್ಗ III(ಬಿ) | 1 | – | – | – | 1 |
| **ಒಟ್ಟು** | **3** | **2** | **1** | **1** | **7** |

**4. ಶೈಕ್ಷಣಿಕ ವಿದ್ಯಾರ್ಹತೆ:**

ಎ) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ.

ಬಿ) ಡ್ರೈವಿಂಗ್ ಲೈಸೆನ್ಸ್ ಹೊಂದಿರುವವರಿಗೆ ಆದ್ಯತೆ ನೀಡಲಾಗುವುದು.

**V. ಜವಾನರು:**

1. ಹುದ್ದೆಗಳ ಸಂಖ್ಯೆ : 15
2. ವೇತನ ಶ್ರೇಣಿ – 4800–100–6000–125–6500–150–7100–175–7275 ಹಾಗೂ ಲಭ್ಯವಿರುವ ಇತರೆ ಭತ್ಯೆಗಳು
3. ಹುದ್ದೆಗಳ ವರ್ಗೀಕರಣ :

| ವರ್ಗೀಕರಣ | ಇತರೆ | ಗ್ರಾಮೀಣ | ಮಹಿಳಾ | ಮಾಜಿ ಸೈನಿಕ | ಅಂ.ವಿಕಲ ದೃಷ್ಟಿಮಾಂದ್ಯ | ಕನ್ನಡ ಮಾಧ್ಯಮ | ಒಟ್ಟು |
|---|---|---|---|---|---|---|---|
| ಸಾಮಾನ್ಯ | 1 | 2 | 2 | 1 | – | 1 | 7 |
| ಪ್ರವರ್ಗ I | – | – | 1 | – | – | – | 1 |
| ಪ್ರವರ್ಗ II(ಎ) | – | 1 | 1 | – | 1 | – | 3 |

| ವರ್ಗೀಕರಣ | ಇತರೆ | ಗ್ರಾಮೀಣ | ಮಹಿಳಾ | ಮಾಜಿ ಸೈನಿಕ | ಅಂ.ವಿಕಲ ದೃಷ್ಟಿಮಾಂದ್ಯ | ಕನ್ನಡ ಮಾಧ್ಯಮ | ಒಟ್ಟು |
|---|---|---|---|---|---|---|---|
| ಪ್ರವರ್ಗ III(ಎ) | 1 | – | – | – | – | – | 1 |
| ಪ್ರವರ್ಗ III(ಬಿ) | 1 | – | – | – | – | – | 1 |
| ಪರಿಶಿಷ್ಟ ಜಾತಿ | – | – | 1 | – | 1 | – | 2 |
| **ಒಟ್ಟು** | **3** | **3** | **5** | **1** | **2** | **1** | **15** |

**ಸೂಚನೆ:** ಸೂಕ್ತ ದೃಷ್ಟಿಮಾಂದ್ಯ ಅಂಗವಿಕಲ ಅಭ್ಯರ್ಥಿಗಳು ಲಭ್ಯವಿಲ್ಲದಿದ್ದಲ್ಲಿ ಇತರೆ ಅಂಗವಿಕಲ ಅಭ್ಯರ್ಥಿಗಳನ್ನು ಪರಿಗಣಿಸಲಾಗುವುದು.

**4. ಶೈಕ್ಷಣಿಕ ವಿದ್ಯಾರ್ಹತೆ:**

ಎ) 7ನೇ ತರಗತಿಯಲ್ಲಿ ತೇರ್ಗಡೆ ಹೊಂದಿರಬೇಕು.

ಬಿ) ಅಭ್ಯರ್ಥಿಗೆ ಕನ್ನಡದಲ್ಲಿ ಓದಲು ಹಾಗೂ ಬರೆಯಲು ತಿಳಿದಿರಬೇಕು.

**ವಯೋಮಿತಿ:**

| | | | | |
|---|---|---|---|---|
| ಕನಿಷ್ಠ ವಯೋಮಿತಿ | : | 18 ವರ್ಷ | | |
| ಗರಿಷ್ಠ ವೆಯೋಮಿತಿ | : | ಸಾಮಾನ್ಯ ವರ್ಗ | – | 35 ವರ್ಷ |
| | | 2ಎ, 2ಬಿ, 3ಎ, 3ಬಿ | – | 38 ವರ್ಷ |
| | | ಪ.ಜಾ, ಪ.ಪಂ, ಪ್ರವರ್ಗ 1 | – | 40 ವರ್ಷ |

ವಿಧವೆಯರಿಗೆ, ಮಾಜಿ ಸೈನಿಕರಿಗೆ ಹಾಗೂ ಅಂಗವಿಕಲರಿಗೆ ನಿಯಮಾನುಸಾರ ವಯೋಮಿತಿಯಲ್ಲಿ ಸಡಿಲಿಕೆ ನೀಡಲಾಗುವುದು.

**ಆಯ್ಕೆ ವಿಧಾನ :**

ಕರ್ನಾಟಕ ಅಧೀನ ನ್ಯಾಯಾಲಯಗಳು (ಮಿನಿಸ್ಟೀರಿಯಲ್ ಮತ್ತು ಇತರೆ ಹುದ್ದೆಗಳು) (ನೇಮಕಾತಿ) (ತಿದ್ದುಪಡಿ) ನಿಯಮಗಳು 2007ರ ಅನ್ವಯ ನೇರ ನೇಮಕಾತಿಯ ಮೂಲಕ ಆಯ್ಕೆ ಮಾಡಲಾಗುವುದು.

I. ಶೀಘ್ರಲಿಪಿಗಾರರ ಹುದ್ದೆಗೆ ಈ ಕೆಳಕಂಡ ಅರ್ಹತಾ ಪರೀಕ್ಷೆಯನ್ನು ನಡೆಸಲಾಗುವುದು.

ಅ) ಒಂದು ನಿಮಿಷಕ್ಕೆ 120 ಶಬ್ದಗಳಂತೆ 5 ನಿಮಿಷಗಳ ಅವಧಿಯ ಉಕ್ತಲೇಖನ ಮತ್ತು ಅದನ್ನು ಲಿಪ್ಯಂತರ ಮಾಡಲು 45 ನಿಮಿಷಗಳ ಅವಧಿ. (ಗರಿಷ್ಠ 100 ಅಂಕಗಳ ಪರೀಕ್ಷೆಯಲ್ಲಿ ಕನಿಷ್ಠ 50 ಅಂಕಗಳನ್ನು ಪಡೆಯಬೇಕಾಗಿರುತ್ತದೆ).

ಆ) ಶೀಘ್ರಲಿಪಿಗಾರರ ಹುದ್ದೆಗೆ ಅವರು ಪಡೆದಿರುವ ಶೈಕ್ಷಣಿಕ ವಿದ್ಯಾರ್ಹತೆಯ ಅಂಕಗಳು ಮತ್ತು ಅರ್ಹತಾ ಪರೀಕ್ಷೆಯ ಗರಿಷ್ಠ ಅಂಕಗಳ ಆಧಾರದ ಮೇಲೆ ಒಂದು ಹುದ್ದೆಗೆ ಐದು ಅಭ್ಯರ್ಥಿಗಳನ್ನು ಸಂದರ್ಶನಕ್ಕೆ ಕರೆಯಲಾಗುವುದು.

II. ಬೆರಳಚ್ಚುಗಾರರ ಹಾಗೂ ಬೆರಳಚ್ಚು–ನಕಲುಗಾರರ ಹುದ್ದೆಗೆ:

ಅ) 15 ನಿಮಿಷಗಳ ಉಕ್ತಲೇಖನವನ್ನು ಬೆರಳಚ್ಚುಪಡಿಸುವ ಅರ್ಹತಾ ಪರೀಕ್ಷೆಯನ್ನು ನಡೆಸಲಾಗುವುದು (ಗರಿಷ್ಠ 100 ಅಂಕಗಳ ಪರೀಕ್ಷೆಯಲ್ಲಿ ಕನಿಷ್ಠ 50 ಅಂಕಗಳನ್ನು ಪಡೆಯಬೇಕಾಗಿರುತ್ತದೆ).

ಆ) ಸಂದರ್ಶನ

ಇ) ಶೀಘ್ರಲಿಪಿಗಾರರ / ಬೆರಳಚ್ಚುಗಾರ / ಬೆರಳಚ್ಚು–ನಕಲುಗಾರರ ಹುದ್ದೆಗಳಿಗೆ 1:5 ರ ಅನುಪಾತ, ಹಾಗೂ ಜವಾನರ ಹುದ್ದೆಗಳಿಗೆ 1:10 ರ ಅನುಪಾತದಲ್ಲಿ, ನಿಗದಿಪಡಿಸಿದ ವಿದ್ಯಾರ್ಹತೆಗೆ ಅನುಗುಣವಾಗಿ, ಅತೀಹೆಚ್ಚು ಅಂಕ ಪಡೆದ ಅಭ್ಯರ್ಥಿಗಳನ್ನು ಸಂದರ್ಶನಕ್ಕೆ ಆಯ್ಕೆ ಮಾಡಲಾಗುವುದು, ಅಭ್ಯರ್ಥಿಗಳು ತಮ್ಮ ಸ್ವಂತ ಖರ್ಚಿನಲ್ಲಿ ಸಂದರ್ಶನಕ್ಕೆ ಹಾಜರಾಗುವುದು.

III. ಪ್ರೋಸಸ್ ಜಾರಿಕಾರರ ಹುದ್ದೆಗೆ :

ಅ) ಪ್ರೋಸಸ್ ಜಾರಿಕಾರ ಹುದ್ದೆಗೆ ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಪಡೆದ ಗರಿಷ್ಠ ಅಂಕಗಳ ಅರ್ಹತೆಯ ಅಧಾರದ ಮೇಲೆ ಒಂದು ಹುದ್ದೆಗೆ 25 ಅಭ್ಯರ್ಥಿಗಳನ್ನು ಮಾತ್ರ ಸಂದರ್ಶನಕ್ಕೆ ಕರೆಯಲಾಗುವುದು.

ಆ) ಸಂದರ್ಶನಕ್ಕೆ ಕರೆಯಲಾಗುವ ಅಭ್ಯರ್ಥಿಗೆ ಕನ್ನಡದಲ್ಲಿ ಓದುವ ಹಾಗೂ ಬರೆಯುವ ಬಗ್ಗೆ ಪ್ರವೀಣತೆ ಮತ್ತು ಸಾಮಾನ್ಯಜ್ಞಾನದ ತಿಳುವಳಿಕೆಯ ಬಗ್ಗೆ ಪರೀಕ್ಷಿಸಲಾಗುವುದು.

IV. ಜವಾನರ ಹುದ್ದೆಗೆ :

ಅ) ಜವಾನರ ಹುದ್ದೆಗೆ 7ನೇ ತರಗತಿಯಲ್ಲಿ ಪಡೆದ ಗರಿಷ್ಠ ಅಂಕಗಳ ಅರ್ಹತೆಯ ಅಧಾರದ ಮೇಲೆ ಒಂದು ಹುದ್ದೆಗೆ 10 ಅಭ್ಯರ್ಥಿಗಳನ್ನು ಮಾತ್ರ ಸಂದರ್ಶನಕ್ಕೆ ಕರೆಯಲಾಗುವುದು.

**ಪ್ರಮುಖವಾದ ಸೂಚನೆಗಳು:**

ಅಭ್ಯರ್ಥಿಗಳು ಕೆಳಕಂಡ ಪ್ರಮಾಣ ಪತ್ರಗಳ ಒಂದೊಂದು ಛಾಯಾ ಪ್ರತಿ (ಫೋಟೋ ಕಾಪಿ/ಜೆರಾಕ್ಸ್) ಗಳನ್ನು ಸ್ವಯಂ–ದೃಢೀಕರಿಸಿ ಅರ್ಜಿಯೊಂದಿಗೆ ಲಗತ್ತಿಸಬೇಕು. ಅರ್ಜಿಯೊಂದಿಗೆ ಮೂಲ ಪ್ರತಿ (ಒರಿಜಿನಲ್) ಗಳನ್ನು ಲಗತ್ತಿಸುವ ಅವಶ್ಯಕತೆ ಇರುವುದಿಲ್ಲ.

1. ಹುದ್ದೆಗೆ ನಿಗದಿಪಡಿಸಲಾದ ವಿದ್ಯಾರ್ಹತೆಯ ಎಲ್ಲಾ ವರ್ಷಗಳ ಅಂಕಪಟ್ಟಿಗಳು ಹಾಗೂ ಪ್ರಮಾಣ ಪತ್ರಗಳು.
2. ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ, ವರ್ಗಾವಣೆ ಪ್ರಮಾಣ ಪತ್ರ, ಜನನ ದಿನಾಂಕವನ್ನು ತೋರಿಸುವ ಸಂಚಿತ ದಾಖಲೆಯ ಉದ್ಧೃತ ಭಾಗ.
3. ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ – 1 ಮತ್ತು 2 ರಲ್ಲಿ (ಮೀಸಲಾತಿ ಕೋರಿದ್ದಲ್ಲಿ)
4. ಅಭ್ಯರ್ಥಿಯು ಕೊನೆಯಲ್ಲಿ ವಿದ್ಯಾಭ್ಯಾಸ ಮಾಡಿದ ಶಾಲಾ, ಕಾಲೇಜಿನ ಮುಖೋಪಾಧ್ಯಾಯರು, ಪ್ರಾಂಶುಪಾಲರಿಂದ ಪಡೆದ ಒಂದು ನಡತೆ ಪ್ರಮಾಣ ಪತ್ರ.
5. ಅಭ್ಯರ್ಥಿಯು ನಡತೆಯನ್ನು ದೃಢಿಕರಿಸುವ ಬಗ್ಗೆ ಅವನು ಓದಿರುವ ವಿದ್ಯಾಸಂಸ್ಥೆಗಳಿಗೆ ಸಂಬಂಧಪಡದ ಹಾಗೂ ಅಭ್ಯರ್ಥಿಯ ಸಂಬಂಧಿಗಳಲ್ಲದ ಇಬ್ಬರು ಸ್ಥಳೀಯ ಗಣ್ಯವಕ್ತಿಗಳಿಂದ ಪಡೆದ 6 ತಿಂಗಳ ಈಚೆಗಿನ ಎರಡು ನಡತೆ ಪ್ರಮಾಣ ಪತ್ರಗಳು.

**ಇತರೆ ಸೂಚನೆಗಳು:**

1. ಸೇವೆಯಲ್ಲಿರುವ ಅಭ್ಯರ್ಥಿಗಳು ಅರ್ಜಿಯೊಂದಿಗೆ ತಮ್ಮ ಮೇಲಾಧಿಕಾರಿಗಳಿಂದ ಪಡೆದ ದೃಢಿಕರಣ ಹಾಗೂ ಅನುಮತಿ ಪ್ರಮಾಣ ಪತ್ರವನ್ನು ನೀಡತಕ್ಕದ್ದು.
2. ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೆಯ ಕೆಲಸದ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.
3. ಅರ್ಜಿಯೊಂದಿಗೆ 6 ರೂಪಾಯಿಯ ಅಂಚೆ ಮುದ್ರಾಂಕ (Postal Stamp) ವನ್ನು ಹೊಂದಿರುವ ಸ್ವ–ವಿಳಾಸದ ಲಕೋಟೆಯನ್ನು ಸಲ್ಲಿಸತಕ್ಕದ್ದು.
4. ಅರ್ಜಿಯೊಂದಿಗೆ ಅಭ್ಯರ್ಥಿಗಳು ತಮ್ಮ ಇತ್ತೀಚಿನ ಒಂದು ಭಾವಚಿತ್ರವನ್ನು ಸ್ವ–ದೃಢೀಕರಿಸಿ ಲಗತ್ತಿಸಬೇಕು.
5. ಸಂದರ್ಶನಕ್ಕೆ ಆಯ್ಕೆಯಾದ ಅಭ್ಯರ್ಥಿಗಳು ತಮ್ಮ ಸ್ವಂತ ಖರ್ಚಿನಲ್ಲಿಯೇ ಸಂದರ್ಶನಕ್ಕೆ ಹಾಜರಾಗಬೇಕು ಹಾಗೂ ಸಂದರ್ಶನ ಪತ್ರ ಬಾರದಿರುವ ಅಭ್ಯರ್ಥಿಗಳು ಸಂದರ್ಶನಕ್ಕೆ ಅರ್ಹರಲ್ಲವೆಂದು ಭಾವಿಸಿಕೊಳ್ಳತಕ್ಕದ್ದು.
6. ಆಯ್ಕೆಯ ಸಂಬಂಧವಾಗಿ ಸಂದರ್ಶನಕ್ಕೆ ಅನರ್ಹರಾದ ಅಭ್ಯರ್ಥಿಗಳು ಈ ಕಛೇರಿಯೊಂದಿಗೆ ಯಾವುದೇ ಪತ್ರ ವ್ಯವಹಾರವನ್ನು ನಡೆಸಲು ಆಸ್ಪದವಿರುವುದಿಲ್ಲ

**ವಿಶೇಷ ಸೂಚನೆ:**

1. ಮೇಲ್ಕಂಡ ಹುದ್ದೆಗಳಿಗೆ ಅರ್ಜಿಗಳನ್ನು ರಾಮನಗರ ಜಿಲ್ಲಾ ನ್ಯಾಯಾಲಯದ ಕಛೇರಿಯಲ್ಲಿ ವಿತರಿಸಲಾಗುತ್ತದೆ.
2. ಅರ್ಜಿಗಳನ್ನು ಪಡೆಯ ಬಯಸುವ ಅಭ್ಯರ್ಥಿಯು ಕ್ರಾಸ್ ಮಾಡಿದ 10 ರೂ.ಗಳ ಭಾರತೀಯ ಪೋಸ್ಟಲ್ ಆರ್ಡರ್ ಅಥವಾ ಬ್ಯಾಂಕ್ ಡಿ.ಡಿ.ಯನ್ನು **"ಜಿಲ್ಲಾ ನ್ಯಾಯಾಧೀಶರು, ರಾಮನಗರ"** ರವರ ಹೆಸರಿಗೆ ಪಡೆದು ರಾಮನಗರ ಜಿಲ್ಲಾ ನ್ಯಾಯಾಲಯದ ಕಛೇರಿಗೆ ಸಲ್ಲಿಸಿ ಪಡೆಯಬಹುದು. ಪೋಸ್ಟಲ್ ಆರ್ಡರ್ ಅಥವಾ ಬ್ಯಾಂಕ್ ಡಿ.ಡಿ.ಯನ್ನು ಈ ನೇಮಕಾತಿ ಪ್ರಕಟಣಾ ದಿನದಿಂದ 15 ದಿವಸಗಳಿಗಿಂತ ಮುಂಚಿತವಾಗಿ ಪಡೆದಿರಬಾರದು. ಅಂಚೆ ಮೂಲಕ ಅರ್ಜಿ ಪಡೆಯಬಯಸುವ ಅಭ್ಯರ್ಥಿಗಳು 30 ರೂ. ಅಂಚೆ ಚೀಟಿ ಅಂಟಿಸಿದ ಸ್ವ–ವಿಳಾಸ ಬರೆದ ಲಕೋಟೆಯನ್ನು ಮತ್ತು 10 ರೂ. ಪೋಸ್ಟಲ್ ಆರ್ಡರ್ ಅಥವಾ ಬ್ಯಾಂಕ್ ಡಿ.ಡಿ.ಯ ಸಮೇತ ಕಳುಹಿಸಿದ್ದಲ್ಲಿ ಅರ್ಜಿಯನ್ನು ಕಳುಹಿಸಲಾಗುವುದು.
3. ಭರ್ತಿ ಮಾಡಿದ ಅರ್ಜಿಯ ಜೊತೆಗೆ ರೂ.50 (ಎಸ್.ಸಿ/ಎಸ್.ಟಿ ಮತ್ತು ಪ್ರವರ್ಗ–1ಕ್ಕೆ ರೂ.30) ಪೋಸ್ಟಲ್ ಆರ್ಡರ್ ಅಥವಾ ಬ್ಯಾಂಕ್ ಡಿ.ಡಿ.ಯನ್ನು **"ಜಿಲ್ಲಾ ನ್ಯಾಯಾಧೀಶರು, ರಾಮನಗರ"** ರವರ ಹೆಸರಿನಲ್ಲಿ ಪಡೆದು ಪ್ರೊಸೆಸಿಂಗ್ ಶುಲ್ಕವಾಗಿ ಲಗತ್ತಿಸಿ ದಿನಾಂಕಃ 15.05.2010 ರ ಸಂಜೆ 4.00 ಗಂಟೆಯೊಳಗೆ ಜಿಲ್ಲಾ ನ್ಯಾಯಾಧೀಶರು, ಜಿಲ್ಲಾ ನ್ಯಾಯಾಲಯ, ರಾಮನಗರ ರವರಿಗೆ ಸಲ್ಲಿಸತಕ್ಕದ್ದು.
4. ಕೊನೆಯ ದಿನಾಂಕದ ನಂತರ ಸಲ್ಲಿಸಲಾದ ಯಾವುದೇ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

ನಿಗದಿತ ಅರ್ಜಿ ನಮೂನೆಯಲ್ಲಿ ಎಲ್ಲಾ ಅಂಕಣಗಳನ್ನು ಅಭ್ಯರ್ಥಿಗಳು ತಮ್ಮ ಬರಹದಿಂದಲೇ ಭರ್ತಿ ಮಾಡಿರತಕ್ಕದ್ದು. ಸರಿಯಾಗಿ ಅಂಕಣಗಳನ್ನು ಭರ್ತಿ ಮಾಡದೇ ಇರುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

**ಸಿ.ಜಿ. ಹುನಗುಂದ**

ಪಿ.ಆರ್. 250 ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ರಾಮನಗರ.

**ಜಿಲ್ಲಾಧಿಕಾರಿಯವರ ಕಛೇರಿ, ತುಮಕೂರು ಜಿಲ್ಲೆ, ತುಮಕೂರು**

**ಅಧಿಕೃತ ಜ್ಞಾಪನ**

**ನಂ.ವಿಎಎಸ್ ಸಿಆರ್ 305/08–09, ದಿನಾಂಕ: 2ನೇ ಮಾರ್ಚ್ 2010**

**ವಿಷಯ:** ತುಮಕೂರು ಜಿಲ್ಲೆಯ ಕಂದಾಯ ಇಲಾಖೆಯ ಗ್ರಾಮಲೆಕ್ಕಾಧಿಕಾರಿಗಳ ಖಾಲಿ ಹುದ್ದೆಗಳಿಗೆ ನೇರ ನೇಮಕಾತಿ ಆಯ್ಕೆಗೊಂಡ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ನೀಡುವ ಕುರಿತು.

**ಉಲ್ಲೇಖ:**
1 ಸರ್ಕಾರದ ಅಧಿಸೂಚನೆ ಸಂ.ಆರ್‌ಡಿ 299 ಬಿಎಸ್‌ಸಿ 2006.ದಿನಾಂಕ 03.02.2009.
2 ಸರ್ಕಾರದ ಅಧಿಸೂಚನೆ ನಂ. ಕಂಇ 299 ಬಿಎಸ್‌ಸಿ 2006 ದಿನಾಂಕ 24.07.2009 ಮತ್ತು 08.09.2009.
3 ಈ ಕಾರ್ಯಾಲಯದ ಸಮಸಂಖ್ಯೆ ಅಧಿಸೂಚನೆ ದಿನಾಂಕ 26.09.2009.
4 ಸರ್ಕಾರದ ಆದೇಶ ನಂ.ಆರ್‌ಡಿ 130 ಬಿಎಸ್‌ಸಿ 2007 ದಿನಾಂಕ 04.12.2007. ಮತ್ತು 09.02.2009.
5 ಈ ಕಛೇರಿಯ ದಿನಾಂಕ 30.11.2009ರ ಅಧಿಸೂಚನೆ.
6 ಈ ಕಛೇರಿಯ ಇದೇ ಕ್ರಮಾಂಕ ದಿನಾಂಕ 22–12–2009 ರ ಅಧಿಸೂಚನೆ.
7 ಜಿಲ್ಲಾಧಿಕಾರಿಗಳು ದಿನಾಂಕ 28.01.2010ರ ಅಭ್ಯರ್ಥಿಗಳೊಂದಿಗೆ ನೇರ ಸಂದರ್ಶನ.
8 ಸರ್ಕಾರದ ಕಾರ್ಯದರ್ಶಿಗಳು, ಕಂದಾಯ ಇಲಾಖೆ, ಬೆಂಗಳೂರು ರವರ ಪತ್ರದ ಸಂಖ್ಯೆ ಕಂ.ಇ.3198 ಸೇಬಿ 2010 ದಿನಾಂಕ 11–02–2010

ಸರ್ಕಾರದ ಉಲ್ಲೇಖ (1)ರ ಅಧಿಸೂಚನೆ ಯನ್ವಯ ತುಮಕೂರು ಜಿಲ್ಲಾ ಕಂದಾಯ ಘಟಕದಲ್ಲಿ ಖಾಲಿ ಇರುವ ಗ್ರಾಮಲೆಕ್ಕಾಧಿಕಾರಿಗಳ 30 ಹುದ್ದೆಗಳಿಗೆ ಹಾಗೂ ಉಲ್ಲೇಖ (4)ರಲ್ಲಿ ತುಮಕೂರು ಜಿಲ್ಲೆಗೆ ಪ್ರತಿ ತಾಲ್ಲೂಕು ಕಛೇರಿಯ ಭೂಮಿ ಕೇಂದ್ರಗಳಿಗೆ ತಲಾ 05 ರಂತೆ 10 ತಾಲ್ಲೂಕು ಕೇಂದ್ರಗಳಿಗೆ ಮಂಜೂರಾಗಿರುವ 50 ಹುದ್ದೆಗಳು ಸೇರಿ ಒಟ್ಟು 80 ಹುದ್ದೆಗಳಿಗೆ ನೇರ ನೇಮಕಾತಿಯ ಮೂಲಕ ಭರ್ತಿಗೊಳಿಸಲು ಜಿಲ್ಲಾಧಿಕಾರಿಯವರಿಗೆ ಅಧಿಕಾರ ನೀಡಲಾಗಿದೆ.

ಅದರಂತೆ, ಕರ್ನಾಟಕ ನಾಗರಿಕ ಸೇವೆ (Revenue Sub ordinate Branch) (Cadre and Recruitment) (Amendment) ನಿಯಮಗಳು, 2009 ರಲ್ಲಿ ನಿಗದಿಪಡಿಸಿರುವ ವಿದ್ಯಾರ್ಹತೆಯನ್ವಯ ಮೇಲ್ಕಂಡ ಖಾಲಿ ಹುದ್ದೆಗಳನ್ನು ಭರ್ತಿಗೊಳಿಸಲು ಉಲ್ಲೇಖ (3)ರ ಅಧಿಸೂಚನೆಯ ಮೂಲಕ ಅರ್ಹ ಅಭ್ಯರ್ಥಿಗಳಿಂದ ನಿಗದಿತ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಿ, ಸ್ವೀಕೃತಿಯಾದ ಅರ್ಜಿಗಳನ್ನು ಅರ್ಹತೆ ಮತ್ತು ಮೀಸಲಾತಿಯನ್ವಯ ವಿಂಗಡಿಸಿ, ಅರ್ಹ ಅಭ್ಯರ್ಥಿಗಳ ಪರಿಶೀಲನಾ ಪಟ್ಟಿಯನ್ನು 1:3 ಅನುಪಾತದಲ್ಲಿ ಉಲ್ಲೇಖ (5)ರಲ್ಲಿನ ಅಧಿಸೂಚನೆಯಂತೆ ಪ್ರಕಟಿಸಲಾಯಿತು. ಹಾಗೂ ಈ ಪಟ್ಟಿಯ ಬಗ್ಗೆ ಆಕ್ಷೇಪಣೆ / ತಕರಾರು ಅರ್ಜಿಗಳನ್ನು ಸಲ್ಲಿಸಲು ದಿನಾಂಕ 14.12.2009 ರವರೆಗೆ ಕಾಲಾವಕಾಶವನ್ನು ನೀಡಲಾಯಿತು.

ಪರಿಶೀಲನಾ ಪಟ್ಟಿಯಲ್ಲಿನ ಅಭ್ಯರ್ಥಿಗಳ ಮೂಲ ದಾಖಲಾತಿಗಳನ್ನು ದಿನಾಂಕ 15.12.2009 ರಂದು ಪರಿಶೀಲಿಸಿ, ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ದಾಖಲಿಸಿರುವ ಅರ್ಜಿ ಸಂ. 5887–5898/2009 ರ ಪ್ರಕರಣದ ಅಂತಿಮ ತೀರ್ಮಾನಕ್ಕೊಳಪಡುವ ಷರತ್ತಿನ ಮೇರೆಗೆ ಅಂತಿಮ ಆಯ್ಕೆ ಪಟ್ಟಿಯನ್ನು ಉಲ್ಲೇಖ (6)ರಲ್ಲಿ ಕಾಣಿಸಿರುವ ಅಧಿಸೂಚನೆಯಂತೆ ದಿನಾಂಕ 22.12.2009 ರಂದು ಪ್ರಕಟಿಸಲಾಯಿತು.

ಅಂತಿಮ ಆಯ್ಕೆ ಪಟ್ಟಿಯಲ್ಲಿನ ಅಭ್ಯರ್ಥಿಗಳಿಗೆ ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು, ಗ್ರಾಮಲೆಕ್ಕಾಧಿಕಾರಿ ನೇರ ನೇಮಕಾತಿ ಪ್ರಾಧಿಕಾರ, ತುಮಕೂರು ಇವರು ದಿನಾಂಕ 28.01.2010 ರಂದು ವೈಯಕ್ತಿಕ ಸಂದರ್ಶನ ನಡೆಸಲಾಯಿತು.

ಆಯ್ಕೆಯಾದ ಅಭ್ಯರ್ಥಿಗಳ ಪೈಕಿ ಕ್ರ.ಸಂ. 2, 3, 4, 5, 6, 7, 9, 10, 12, 14, 17, 18, 19, 20, 21, 23, 24, 26, 29, 30, 31, 34, 37, 38, 40, 41, 42, 43, 46, 47, 48, 49, 50, 51, 52, 53, 57, 58, 59, 61, 64, 65, 66, 67, 68, 70, 72, 74, 76 ಮತ್ತು 77 ರಲ್ಲಿ ಹೆಸರಿಸಿರುವ ಅಭ್ಯರ್ಥಿಗಳ, ಮೂಲ ಅಂಕಪಟ್ಟಿಗಳ ನೈಜತೆ, ಅಭ್ಯರ್ಥಿಗಳ ಗುಣ ನಡತೆ, ಮಾಜಿ ಸೈನಿಕ ಮೀಸಲಾತಿ, ಅಂಗವಿಕಲ

ಮೀಸಲಾತಿ, ಜಾತಿ ಮತ್ತು ಆದಾಯ ಪ್ರಮಾಣ ಪತ್ರಗಳು, ಗ್ರಾಮೀಣ/ಕನ್ನಡ ಮೀಸಲಾತಿ ಹಾಗೂ ಯೋಜನಾ ನಿರಾಶ್ರಿತರ ಮೀಸಲಾತಿ ಸಂಬಂಧಪಟ್ಟ ಪ್ರಾಧಿಕಾರಗಳಿಂದ ಸಿಂಧುತ್ವ ಪ್ರಮಾಣ ಪತ್ರಗಳು ಬಂದಿರುತ್ತದೆ.

ಕ್ರ.ಸಂ. 1, 8, 11, 13, 15, 16, 22, 25, 27, 28, 32, 33, 35, 36, 39, 44, 45, 54, 55, 56, 60, 62, 63, 69, 71, 73, ಮತ್ತು 75 ರಲ್ಲಿ ಹೆಸರಿಸಿರುವ ಅಭ್ಯರ್ಥಿಗಳ ಬಾಬ್ತು ಪೂರ್ಣ ಪ್ರಮಾಣದಲ್ಲಿ ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದ ಸಿಂಧುತ್ವದ ಮಾಹಿತಿ ಬಂದಿರುವುದಿಲ್ಲ.

ಪ್ರಯುಕ್ತ ಕ್ರ.ಸಂ.1, 8, 11, 13, 15, 16, 22, 25, 27, 28, 32, 33, 35, 36, 39, 44, 45, 54, 55, 56, 60, 62, 63, 69, 71, 73, ಮತ್ತು 75 ರಲ್ಲಿ ಹೆಸರಿಸಿರುವ ಅಭ್ಯರ್ಥಿಗಳ ಸಿಂಧುತ್ವ ಪ್ರಮಾಣ ಪತ್ರಗಳ ಬರುವಿಕೆಯನ್ನು ಕಾಯ್ದಿರಿಸಿ ಈ ಆದೇಶದಲ್ಲಿನ ಕ್ರಮ ಸಂಖ್ಯೆ 1 ರಿಂದ 77 ರಲ್ಲಿ ಹೆಸರಿಸಿರತಕ್ಕ ಆಯ್ಕೆಯಾದ ಅಭ್ಯರ್ಥಿಗಳನ್ನು ಗ್ರಾಮಲೆಕ್ಕಾಧಿಕಾರಿ ಹುದ್ದೆಯ ರೂ. 5800–100–6000–125–6500–150–7100–175–7800–200–8600–225–9500–250–10500 ವೇತನ ಶ್ರೇಣಿಯಲ್ಲಿ ಅವರ ಹೆಸರಿನ ಎದುರು ನಮೂದಿಸಿರುವ ಕಾರ್ಯಸ್ಥಳಕ್ಕೆ ಈ ಕೆಳಕಂಡ ನಿಬಂಧನೆಗಳನುಸಾರ ನೇಮಕಾತಿಗೊಳಿಸಿ ಆದೇಶ ಹೊರಡಿಸಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ನೇಮಕಗೊಳಿಸಿದ ಹುದ್ದೆ ಮತ್ತು ಕಾರ್ಯಸ್ಥಳ | ಯಾರಲ್ಲಿ ಹಾಜರಾಗತಕ್ಕದ್ದು |
|---|---|---|---|
| 1 | ನಂದಿನಿ.ಕೆ.ಆರ್. ಬಿನ್ ರಮೇಶ್.ಕೆ.ವಿ. ಶ್ರೀರಕ್ಷಾ ನಿಲಯ, ಶ್ರೀರಾಮದೇವಾಲಯದ ಹತ್ತಿರ, ಕಾರಂಜಿ ಕಟ್ಟೆ, 9ನೇ ಅಡ್ಡರಸ್ತೆ, ಕೋಲಾರ. 563101 | ಗ್ರಾಮಲೆಕ್ಕಾಧಿಕಾರಿ, ಭೂಮಿ ಕೇಂದ್ರ, ಮಧುಗಿರಿ ತಾಲ್ಲೂಕು | ತಹಸೀಲ್ದಾರ್, ಮಧುಗಿರಿ ತಾಲ್ಲೂಕು |
| 2 | ಸೌಮ್ಯ.ಕೆ. ಬಿನ್ ಕಾಂತರಾಜು, ಶಿವಮಣಿ ನಿಲಯ, ಐಟಿಐ ಕಾಲೇಜು ಹತ್ತಿರ, ತುರುವೇಕೆರೆ – 572227 ತುಮಕೂರು ಜಿಲ್ಲೆ. | ಗ್ರಾಮಲೆಕ್ಕಾಧಿಕಾರಿ, ಭೂಮಿ ಕೇಂದ್ರ, ಕುಣಿಗಲ್ ತಾಲ್ಲೂಕು | ತಹಸೀಲ್ದಾರ್, ಕುಣಿಗಲ್ ತಾಲ್ಲೂಕು |
| 3 | ಚಂದ್ರಕಲಾ. ಎನ್. ಬಿನ್ ನಾಗರಾಜು. ಇ . ಮದ್ದಕನಹಳ್ಳಿ, ಅಂಚೆ, ಗೌಡಗೆರೆ ಹೋಬಳಿ, ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ. | ಗ್ರಾಮಲೆಕ್ಕಾಧಿಕಾರಿ, ಭೂಮಿ ಕೇಂದ್ರ, ಶಿರಾ ತಾಲ್ಲೂಕು | ತಹಸೀಲ್ದಾರ್, ಶಿರಾ ತಾಲ್ಲೂಕು |
| 4 | ಪ್ರತೀಮ. ಬಿ.ವಿ. ಬಿನ್ ವಿಷಕಂಠಪ್ಪ, ಬಿ.ವಿ., ಬೆಟ್ಟದಸಾತೇನಹಳ್ಳಿ, ಬಾಗಿವಾಳು, ಅಂಚೆ, ಹೊಳೆನರಸೀಪು ರ ತಾಲ್ಲೂಕು, ಹಾಸನ ಜಿಲ್ಲೆ. | ಗ್ರಾಮಲೆಕ್ಕಾಧಿಕಾರಿ, ಭೂಮಿ ಕೇಂದ್ರ, ಕುಣಿಗಲ್ ತಾಲ್ಲೂಕು | ತಹಸೀಲ್ದಾರ್, ಕುಣಿಗಲ್ ತಾಲ್ಲೂಕು |
| 5 | ಶಾಂತ. ಹೆಚ್.ಎಂ. ಬಿನ್ ಮರಿಯಣ್ಣ, ಹೊಸೂರು, (ಅಂಚೆ) ಶಿರಾ ತಾಲ್ಲೂಕು. ತುಮಕೂರು ಜಿಲ್ಲೆ. | ಗ್ರಾಮಲೆಕ್ಕಾಧಿಕಾರಿ, ಭೂಮಿ ಕೇಂದ್ರ, ಮಧುಗಿರಿ ತಾಲ್ಲೂಕು | ತಹಸೀಲ್ದಾರ್, ಮಧುಗಿರಿ ತಾಲ್ಲೂಕು |
| 6 | ಶಿವಶಂಕರನಾಯ್ಕ.ಕೆ.ಟಿ. ಬಿನ್ ತಿಪ್ಪೇನಾಯ್ಕ, ಕ್ಯಾತಗಾನಕೆರೆ ತಾಂಡ, ಕ್ಯಾತಗಾನಕೆರೆವ ಪೋಸ್ಟ್, ಪಾವಗಡ ತಾಲ್ಲೂಕು, ತುಮಕೂರು ಜಿಲ್ಲೆ. | ಗ್ರಾಮಲೆಕ್ಕಾಧಿಕಾರಿ, ಮೈದನಹಳ್ಳಿ ವೃತ್ತ, ಕೊಡಿಗೇನಹಳ್ಳಿ ಹೋಬಳಿ , ಮಧುಗಿರಿ ತಾಲ್ಲೂಕು | ತಹಸೀಲ್ದಾರ್, ಮಧುಗಿರಿ. ತಾಲ್ಲೂಕು |
| 7 | ಅರುಣಕುಮಾರ.ಜೆ.ಎಸ್. ಬಿನ್ ಶಂಕರೇಗೌಡ, ಜವರನಹಳ್ಳಿ, ಬಿ.ಜಿ.ನಗರ ಪೋಸ್ಟ್, ಬೆಳ್ಳೂರು ಹೋಬಳಿ, ನಾಗಮಂಗಲ ತಾಲ್ಲೂಕು, ಮಂಡ್ಯ ಜಿಲ್ಲೆ. | ಗ್ರಾಮಲೆಕ್ಕಾಧಿಕಾರಿ, ತಿಪ್ಪೂರು ವೃತ್ತ, ಯಡಿಯೂರು ಹೋಬಳಿ, ಕುಣಿಗಲ್ ತಾಲ್ಲೂಕು. | ತಹಸೀಲ್ದಾರ್, ಕುಣಿಗಲ್ ತಾಲ್ಲೂಕು |
| 8 | ಕಾವ್ಯಶ್ರೀ ಬಿನ್ ಶ್ರೀನಿವಾಸ, ವಿಡಿಜಿ ಪಾಳ್ಯ, ದೊಡ್ಡೇರಿ ಹೋಬಳಿ, ಮಧುಗಿರಿ ತಾಲ್ಲೋಕು, ತುಮಕೂರು ಜಿಲ್ಲೆ. | ಗ್ರಾಮಲೆಕ್ಕಾಧಿಕಾರಿ, ಭೂಮಿ ಕೇಂದ್ರ, ಮಧುಗಿರಿ ತಾಲ್ಲೂಕು | ತಹಸೀಲ್ದಾರ್, ಮಧುಗಿರಿ ತಾಲ್ಲೂಕು |

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ನೇಮಕಗೊಳಿಸಿದ ಹುದ್ದೆ ಮತ್ತು ಕಾರ್ಯಸ್ಥಳ | ಯಾರಲ್ಲಿ ಹಾಜರಾಗತಕ್ಕದ್ದು |
|---|---|---|---|
| 9 | ಉಷಾ.ಎ.ಎಂ. ಬಿನ್ ಮಹಲಿಂಗಯ್ಯ, ಹಾಲೇನಹಳ್ಳಿ, ದೊಡ್ಡಕುನ್ನಾಲ ಅಂಚೆ, ಕಡಬಾ ಹೋಬಳಿ, ಗುಬ್ಬಿ ತಾಲ್ಲೂಕು. ತುಮಕೂರು ಜಿಲ್ಲೆ | ಗ್ರಾಮಲೆಕ್ಕಾಧಿಕಾರಿ, ಭೂಮಿ ಕೇಂದ್ರ, ತಿಪಟೂರು ತಾಲ್ಲೂಕು | ತಹಸೀಲ್ದಾರ್, ತಿಪಟೂರು ತಾಲ್ಲೂಕು |
| 10 | ಮಂಜುನಾಥ .ಎಂ.ಸಿ. ಬಿನ್ ಚಿಕ್ಕಣ್ಣ, ಹೆಚ್. ಶ್ರೀ.ನಂದಿನಿ ನಿಲಯ, ಜೈಭೀಮ್ ರಸ್ತೆ, ಶಾಂತಿನಗರ, ತುಮಕೂರು 572102 | ಗ್ರಾಮಲೆಕ್ಕಾಧಿಕಾರಿ, ಭೂಮಿ ಕೇಂದ್ರ, ಪಾವಗಡ ತಾಲ್ಲೂಕು | ತಹಸೀಲ್ದಾರ್, ಪಾವಗಡ ತಾಲ್ಲೂಕು. |
| 11 | ಗೀತಾ.ಆರ್. ಬಿನ್ ರಂಗಶಾಮಯ್ಯ, ಭೈರಪ್ಪನಪಾಳ್ಯ, ಹೆಗ್ಗುಂದ ಪೋಸ್ಟ್, ಸೋಂಪು ರ ಹೋಬಳಿ, ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ. 562111 | ಗ್ರಾಮಲೆಕ್ಕಾಧಿಕಾರಿ, ಭೂಮಿ ಕೇಂದ್ರ, ಕೊರಟಗೆರೆ ತಾಲ್ಲೂಕು | ತಹಸೀಲ್ದಾರ್, ಕೊರಟಗೆರೆ ತಾಲ್ಲೂಕು |
| 12 | ಲಕ್ಷ್ಮೀಪತಿ.ಎಸ್. ಬಿನ್ ಶಿವಣ್ಣ, ಮಡಿವಾಳರ ಬೀದಿ, ಕಂದಿಕೆರೆ (ಅಂಚೆ), ಚಿಕ್ಕನಾಯಕನಹಳ್ಳಿ ತಾಲ್ಲೂಕು, ತುಮಕೂರು ಜಿಲ್ಲೆ. | ಗ್ರಾಮಲೆಕ್ಕಾಧಿಕಾರಿ, ದಸರೀಘಟ್ಟ ವೃತ್ತ, ಕಸಬಾ ಹೋಬಳಿ ತಿಪಟೂರು ತಾಲ್ಲೂಕು. | ತಹಸೀಲ್ದಾರ್, ತಿಪಟೂರು ತಾಲ್ಲೂಕು. |
| 13 | ವಿನುತ. ಎಂ.ಎಸ್. ಬಿನ್ ಶಿವಣ್ಣ, ಕೆ.ಜಿ.ಪಾಳ್ಯ, ಊರುಕೆರೆ (ಅಂಚೆ), ತುಮಕೂರು ತಾಲ್ಲೂಕು, ತುಮಕೂರು ಜಿಲ್ಲೆ. | ಗ್ರಾಮಲೆಕ್ಕಾಧಿಕಾರಿ, ಭೂಮಿ ಕೇಂದ್ರ, ಗುಬ್ಬಿ ತಾಲ್ಲೂಕು | ತಹಸೀಲ್ದಾರ್, ಗುಬ್ಬಿ ತಾಲ್ಲೂಕು |
| 14 | ಸುಜಾತ.ಜಿ. ಬಿನ್ ಗೋವಿಂದರಾಜು. ಕಲ್ಲುಪಾಳ್ಯ, ಹೊನ್ನುಡುಕೆ ಪೋಸ್ಟ್, ಗೂಳೂರು ಹೋಬಳಿ, ತುಮಕೂರು ತಾಲ್ಲೂಕು, | ಗ್ರಾಮಲೆಕ್ಕಾಧಿಕಾರಿ, ಭೂಮಿ ಕೇಂದ್ರ, ತುಮಕೂರು ತಾಲ್ಲೂಕು | ತಹಸೀಲ್ದಾರ್, ತುಮಕೂರು ತಾಲ್ಲೂಕು |
| 15 | ಸುಮಲತಾ.ಎಂ. ಬಿನ್ ಮುನಿಯಪ್ಪ, ಎಂ.ಸಿ. ಮಾಯಸಂದ್ರ, ತುರುವೇಕೆರೆ ತಾಲ್ಲೂಕು, ತುಮಕೂರು ಜಿಲ್ಲೆ. | ಗ್ರಾಮಲೆಕ್ಕಾಧಿಕಾರಿ, ಭೂಮಿ ಕೇಂದ್ರ, ಗುಬ್ಬಿ ತಾಲ್ಲೂಕು | ತಹಸೀಲ್ದಾರ್, ಗುಬ್ಬಿ ತಾಲ್ಲೂಕು |
| 16 | ರಾಮಪ್ಪ ರಾಂಪು ರ ಬಿನ್ ಭೀಮಾಶಂಕರ, ಅರ್ಜುಣಗಿ, ಬಿ.ಕೆ. (ಪೋಸ್ಟ್), ಇಂಡಿ ತಾಲ್ಲೂಕು, ವಿಜಾಪು ರ, 586217 | ಗ್ರಾಮಲೆಕ್ಕಾಧಿಕಾರಿ, ಹಾರೋಗೆರೆ, ಹುಲಿಕುಂಟೆ ಹೋಬಳಿ, ಶಿರಾ ತಾಲ್ಲೂಕು | ತಹಸೀಲ್ದಾರ್, ಶಿರಾ ತಾಲ್ಲೂಕು. |
| 17 | ಲಕ್ಷ್ಮಿ.ಸಿ.ಟಿ. ಬಿನ್ ತಿಮ್ಮಪ್ಪ.ಟಿ. ಇಂದಿರಾ ಬಡಾವಣೆ, ವೈ.ಎನ್.ಹೊಸಕೋಟೆ, ಪಾವಗಡ ತಾಲ್ಲೂಕು, ತುಮಕೂರು ಜಿಲ್ಲೆ. 572141 | ಗ್ರಾಮಲೆಕ್ಕಾಧಿಕಾರಿ, ಭೂಮಿ ಕೇಂದ್ರ, ಪಾವಗಡ ತಾಲ್ಲೂಕು | ತಹಸೀಲ್ದಾರ್, ಪಾವಗಡ ತಾಲ್ಲೂಕು |
| 18 | ಮಹಮದ್ಇರ್ಫಾನ್, ಸಿ.ಎಂ. ಬಿನ್ ಮಹಮದ್ ಇಮಾಂ ಹುಸೇನ್. ಟಿ.ಎಂ.ಕೆ.ಕಾಂಪೌಂಡ್, ಅಗಸನಕಲ್ಲು, (ಫಾತೀಮಾ ಮಸೀದಿ ಹತ್ತಿರ), ಚಿತ್ರದುರ್ಗ, ಚಿತ್ರದುರ್ಗ ಜಿಲ್ಲೆ, 577502 | ಗ್ರಾಮಲೆಕ್ಕಾಧಿಕಾರಿ, ಚಿರತಹಳ್ಳಿ ವೃತ್ತ, ಹುಲಿಕುಂಟೆ ಹೋಬಳಿ, ಶಿರಾ ತಾಲ್ಲೂಕು | ತಹಸೀಲ್ದಾರ್, ಶಿರಾ ತಾಲ್ಲೂಕು. |
| 19 | ಕೆಂಪಯ್ಯ.ಎನ್.ಪಿ. ಬಿನ್.ಲೇ..ಪುಟ್ಟರಂಗಪ್ಪ, ನವಿಲುಕುರಿಕೆ, ಅಗ್ರಹಾರ (ಅಂಚೆ), ಕೊರಟಗೆರೆ ತಾಲ್ಲೂಕು, ತುಮಕೂರು ಜಿಲ್ಲೆ. 572129 | ಗ್ರಾಮಲೆಕ್ಕಾಧಿಕಾರಿ, ಬೇಡತ್ತೂರು, ಮಿಡಗೇಶಿ ಹೋಬಳಿ, ಮಧುಗಿರಿ ತಾಲ್ಲೂಕು. | ತಹಸೀಲ್ದಾರ್, ಮಧುಗಿರಿ ತಾಲ್ಲೂಕು. |

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ನೇಮಕಗೊಳಿಸಿದ ಹುದ್ದೆ ಮತ್ತು ಕಾರ್ಯಸ್ಥಳ | ಯಾರಲ್ಲಿ ಹಾಜರಾಗತಕ್ಕದ್ದು |
|---|---|---|---|
| 20 | ಶ್ರೀದೇವಿ ಸುರೇಶ್ ಬಾಗಲಕೋಟೆ, ಬಿನ್ ಸುರೇಶ್ ಅಪ್ಪಣ್ಣ ಬಾಗಲಕೋಟೆ. ತಾಂತ್ರಿಕ ಸೇವಾ ಕೇಂದ್ರ, ಕುಣಿಗಲ್ ಸಂತೇ ಮೈದಾನ. ಕುಣಿಗಲ್. | ಗ್ರಾಮಲೆಕ್ಕಾಧಿಕಾರಿ, ಭೂಮಿ ಕೇಂದ್ರ, ಕುಣಿಗಲ್ ತಾಲ್ಲೂಕು | ತಹಸೀಲ್ದಾರ್, ಕುಣಿಗಲ್ ತಾಲ್ಲೂಕ |
| 21 | ರಶ್ಮಿ.ಎಂ.ಎನ್. ಬಿನ್ ನಾರಾಯಣಸ್ವಾಮಿ.ಕೆ.ಎನ್. ಗುರುಭವನ ಪಕ್ಕ ರಸ್ತೆ, 3ನೇ ಕ್ರಾಸ್, ಕೆ.ಆರ್.ಬಡಾವಣೆ, ರಬ್ಬರ್‌ಸ್ಟಾಂಪ್ ಮೇಕರ್ಸ್, ಮಧುಗಿರಿ ತಾಲ್ಲೂಕು. ತುಮಕೂರು ಜಿಲ್ಲೆ. | ಗ್ರಾಮಲೆಕ್ಕಾಧಿಕಾರಿ, ಭೂಮಿ ಕೇಂದ್ರ, ಗುಬ್ಬಿ ತಾಲ್ಲೂಕು | ತಹಸೀಲ್ದಾರ್, ಗುಬ್ಬಿ ತಾಲ್ಲೂಕು |
| 22 | ನಾರಾಯಣ.ಟಿ.ಆರ್. ಬಿನ್ ರಂಗದಾಮಯ್ಯ.ಜಿ. ತಂಡೋಟಿ ಗ್ರಾಮ, ಜನಕಲೋಟಿ ಪೋಸ್ಟ್, ಐ.ಡಿ ಹಳ್ಳಿ, ಮಧುಗಿರಿ ತಾಲ್ಲೂಕು, ತುಮಕೂರು ಜಿಲ್ಲೆ. | ಗ್ರಾಮಲೆಕ್ಕಾಧಿಕಾರಿ, ತಾಳಗುಂದ ವೃತ್ತ, ಕಳ್ಳಂಬೆಳ್ಳ ಹೋಬಳಿ, ಶಿರಾ ತಾಲ್ಲೂಕು. | ತಹಸೀಲ್ದಾರ್ , ಶಿರಾ ತಾಲ್ಲೂಕು. |
| 23 | ಧನಲಕ್ಷ್ಮಿ.ಹೆಚ್.ಜೆ. ಬಿನ್ ಜಯಬಸವಣ್ಣ.ಹೆಚ್.ಪಿ. ಒಬಳಾಪು ರ, ಟಿ.ಎನ್.ಕೋಟೆ ಪೋಸ್ಟ್, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ. | ಗ್ರಾಮಲೆಕ್ಕಾಧಿಕಾರಿ, ಭೂಮಿ ಕೇಂದ್ರ, ಶಿರಾ ತಾಲ್ಲೂಕು | ತಹಸೀಲ್ದಾರ್, ಶಿರಾ ತಾಲ್ಲೂಕು |
| 24 | ಅನುಪಮ, ಹೆಚ್. ಬಿನ್ ಹಾಲಪ್ಪ, ಪೋಲೀಸ್ ಕ್ವಾಟ್ರಸ್, ಚಿಕ್ಕನಾಯ್ಕನಹಳ್ಳಿ ತಾಲ್ಲೂಕು. ತುಮಕೂರು ಜಿಲ್ಲೆ. | ಗ್ರಾಮಲೆಕ್ಕಾಧಿಕಾರಿ, ಭೂಮಿ ಕೇಂದ್ರ, ಶಿರಾ ತಾಲ್ಲೂಕು | ತಹಸೀಲ್ದಾರ್, ಶಿರಾ ತಾಲ್ಲೂಕು |
| 25 | ವಿಜಯಕುಮಾರ .ವೈ.ಎಂ. ಮಾಧವ.ಎಸ್. ನಂ.163 ಎಸ್.ಎಸ್.ನಗರ, ಯಡಿಯೂರು (ಪೋಸ್ಟ್) ಕುಣಿಗಲ್ ತಾಲ್ಲೂಕು. ತುಮಕೂರು ಜಿಲ್ಲೆ. 572142 | ಗ್ರಾಮಲೆಕ್ಕಾಧಿಕಾರಿ, ಮಾರ್ಕೋನಹಳ್ಳಿ ವೃತ್ತ, ಅಮೃತೂರು ಹೋಬಳಿ, ಕುಣಿಗಲ್ ತಾಲ್ಲೂಕು | ತಹಸೀಲ್ದಾರ್, ಕುಣಿಗಲ್ ತಾಲ್ಲೂಕು. |
| 26 | ಅರುಣ.ಹೆಚ್. ಬಿನ್ ಹನುಮಂತರಾವ್.ಎಸ್. ನಂ.125 , ಗುಡ್‌ಶೆಡ್ ಕಾಲೋನಿ, ಶಾಂತಿನಗರ, ತುಮಕೂರು. | ಗ್ರಾಮಲೆಕ್ಕಾಧಿಕಾರಿ, ಭೂಮಿ ಕೇಂದ್ರ, ತುರುವೇಕೆರೆ ತಾಲ್ಲೂಕು. | ತಹಸೀಲ್ದಾರ್, ತುರುವೇಕೆರೆ ತಾಲ್ಲೂಕು. |
| 27 | ಗೀತಾ.ಜಿ.ವಿ. ಬಿನ್ ವೆಂಕಟೇಶಯ್ಯ.ಟಿ. ಗೋವಿಂದಪು ರ, ಹೆಗ್ಗುಂದ ಪೋಸ್ಟ್, ನೆಲಮಂಗಲ ತಾಲ್ಲೂಕು. ಬೆಂಗಳೂರು ಗ್ರಾಮಾಂತರ ಜಿಲ್ಲೆ. | ಗ್ರಾಮಲೆಕ್ಕಾಧಿಕಾರಿ, ಭೂಮಿ ಕೇಂದ್ರ, ಕೊರಟಗೆರೆ ತಾಲ್ಲೂಕು | ತಹಸೀಲ್ದಾರ್, ಕೊರಟಗೆರೆ ತಾಲ್ಲೂಕು |
| 28 | ವಿಶ್ವನಾಥ್.ಎಸ್. ಬಿನ್ ಶಿವಣ್ಣಾಚಾರ್, ದೊಡ್ಡೇಗೌಡನಪಾಳ್ಯ, ಕೊಟ್ಟಿಗೆಗೊಲ್ಲಹಳ್ಳಿ, (ಅಂಚೆ), ತುಮಕೂರು ತಾಲ್ಲೂಕು, ತುಮಕೂರು ಜಿಲ್ಲೆ. | ಗ್ರಾಮಲೆಕ್ಕಾಧಿಕಾರಿ, ಭೂಮಿ ಕೇಂದ್ರ, ಪಾವಗಡ ತಾಲ್ಲೂಕು | ತಹಸೀಲ್ದಾರ್ ಪಾವಗಡ ತಾಲ್ಲೂಕು |
| 29 | ನಾಗರಾಜು.ಡಿ. ಬಿನ್ ಈರಣ್ಣ.ಡಿ.ಎನ್. ಮನೆ,ನಂ.100, ಬನಶಂಕರಿ ಜ್ಯೋತಿ ನಗರ, ಶಿರಾ, ಶಿರಾ ತಾಲ್ಲೂಕು. ತುಮಕೂರು ಜಿಲ್ಲೆ. | ಗ್ರಾಮಲೆಕ್ಕಾಧಿಕಾರಿ, ಹುಣಸೇಕಟ್ಟೆ ವೃತ್ತ, ಬುಕ್ಕಾಪಟ್ಟಣ ಹೋಬಳಿ, ಶಿರಾ ತಾಲ್ಲೂಕು | ತಹಸೀಲ್ದಾರ್, ಶಿರಾ ತಾಲ್ಲೂಕು. |

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ನೇಮಕಗೊಳಿಸಿದ ಹುದ್ದೆ ಮತ್ತು ಕಾರ್ಯಸ್ಥಳ | ಯಾರಲ್ಲಿ ಹಾಜರಾಗತಕ್ಕದ್ದು |
|---|---|---|---|
| 30 | ವೆಂಕಟೇಶ್ ಬಿನ್ ಗಂಗಯ್ಯ, ನಾರಸಂದ್ರ, ಕುದೂರು ಹೋಬಳಿ, ಮಾಗಡಿ ತಾಲ್ಲೂಕು, ರಾಮನಗರ ಜಿಲ್ಲೆ. 562127 | ಗ್ರಾಮಲೆಕ್ಕಾಧಿಕಾರಿ, ಆರ್.ಬ್ಯಾಡರಹಳ್ಳಿ ವೃತ್ತ, ಹುಲಿಯೂರುದುರ್ಗ ಹೋಬಳಿ, ಕುಣಿಗಲ್ ತಾಲ್ಲೂಕು | ತಹಸೀಲ್ದಾರ್, ಕುಣಿಗಲ್ ತಾಲ್ಲೂಕು. |
| 31 | ಸುಚಿತ್ರಾ ಬಿನ್ ಕೆ.ಬಿ.ಗೌಡ, ಮುನಿಯನಪಾಳ್ಯ, ಕಿತ್ನಾಮಂಗಲ ಅಂಚೆ, ಕಸಬಾ ಹೋಬಳಿ, ಕುಣಿಗಲ್ ತಾಲ್ಲೋಕು. ತುಮಕೂರು ಜಿಲ್ಲೆ. | ಗ್ರಾಮಲೆಕ್ಕಾಧಿಕಾರಿ, ಭೂಮಿ ಕೇಂದ್ರ, ಕುಣಿಗಲ್ ತಾಲ್ಲೂಕು | ತಹಸೀಲ್ದಾರ್, ಕುಣಿಗಲ್ ತಾಲ್ಲೂಕು. |
| 32 | ರಮ್ಯಾ. ಬಿ.ಎಸ್. ಬಿನ್ ಸಣ್ಣಕೆಂಪಯ್ಯ, ಬನ್ನಾಯ್ಕನಹಳ್ಳಿ, ಕಲ್ಲೇಗೌಡನಪಾಳ್ಯ ಅಂಚೆ., ಕಸಬಾ ಹೋಬಳಿ, ತಿಪಟೂರು ತಾಲ್ಲೂಕು. ತುಮಕೂರು ಜಿಲ್ಲೆ. 272202 | ಗ್ರಾಮಲೆಕ್ಕಾಧಿಕಾರಿ, ಭೂಮಿ ಕೇಂದ್ರ, ತಿಪಟೂರು ತಾಲ್ಲೂಕು | ತಹಸೀಲ್ದಾರ್, ತಿಪಟೂರು ತಾಲ್ಲೂಕು. |
| 33 | ಅಂಬಿಕಾ.ಹೆಚ್.ಆರ್. ಬಿನ್ ರಾಮೇಗೌಡ.ಹೆಚ್.ಆರ್. ಹೊದೇಕಲ್ಲು, ಬ್ಯಾತಾ ಪೋಸ್ಟ್, ಊರ್ಡಿಗೆರೆ ಹೋಬಳಿ, ತುಮಕೂರು ತಾಲ್ಲೂಕು. ತುಮಕೂರು ಜಿಲ್ಲೆ. | ಗ್ರಾಮಲೆಕ್ಕಾಧಿಕಾರಿ, ಭೂಮಿ ಕೇಂದ್ರ, ತುಮಕೂರು ತಾಲ್ಲೂಕು | ತಹಸೀಲ್ದಾರ್, ತುಮಕೂರು ತಾಲ್ಲೂಕು. |
| 34 | ಶಾಲಿನಿ.ಕೆ.ಎಲ್. ಬಿನ್ ಲೋಕೇಶ್.ಕೆ.ಎಸ್. ಯಳಸೂರು (ಅಂಚೆ), ಸಕಲೇಶಪು ರ ತಾಲ್ಲೂಕು, ಹಾಸನ ಜಿಲ್ಲೆ. 573137 | ಗ್ರಾಮಲೆಕ್ಕಾಧಿಕಾರಿ, ಭೂಮಿ ಕೇಂದ್ರ, ತಿಪಟೂರು ತಾಲ್ಲೂಕು | ತಹಸೀಲ್ದಾರ್, ತಿಪಟೂರು ತಾಲ್ಲೂಕು. |
| 35 | ಕುಮಾರ.ಬಿ. ಬಿನ್ ಬಸಪ್ಪ, ಸೀತಕಲ್ಲು, (ಅಂಚೆ), ಊರ್ಡಿಗೆರೆ ಹೋಬಳಿ, ತುಮಕೂರು ತಾಲ್ಲೂಕು. ತುಮಕೂರು ಜಿಲ್ಲೆ. | ಗ್ರಾಮಲೆಕ್ಕಾಧಿಕಾರಿ, ಕತ್ರಿಘಟ್ಟ ವೃತ್ತ, ಹುತ್ರಿದುರ್ಗ ಹೋಬಳಿ, ಕುಣಿಗಲ್ ತಾಲ್ಲೂಕು | ತಹಸೀಲ್ದಾರ್, ಕುಣಿಗಲ್ ತಾಲ್ಲೂಕು. |
| 36 | ವಿಶ್ವನಾಥ ಗುರಿಕಾರ ಬಿನ್ ಬಸಪ್ಪ, ಸಾ.ವೀರೇಶನಗರ, ಪೋಸ್ಟ್ ನಗಬಿಹಾಳ, ಮುದ್ದೇಬಿಬಾಳ ತಾಲ್ಲೂಕು, ವಿಜಾಪುರ ಜಿಲ್ಲೆ. 586124 | ಗ್ರಾಮಲೆಕ್ಕಾಧಿಕಾರಿ, ಬುಕ್ಕಾಪಟ್ಟಣ, ಬುಕ್ಕಾಪಟ್ಟಣ ಹೋಬಳಿ, ಶಿರಾ ತಾಲ್ಲೂಕು | ತಹಸೀಲ್ದಾರ್, ಶಿರಾ ತಾಲ್ಲೂಕು. |
| 37 | ರಾಜೇಶ್ವರಿ.ಆರ್. ಬಿನ್ ರಂಗಯ್ಯ. ಎಂ. ಚೋಳೇನಹಳ್ಳಿ, ಚಿಕ್ಕಸಾರಂಗಿ ಅಂಚೆ, ಗೂಳೂರು ಹೋಬಳಿ, ತುಮಕೂರು ತಾಲ್ಲೂಕು. | ಗ್ರಾಮಲೆಕ್ಕಾಧಿಕಾರಿ, ಭೂಮಿ ಕೇಂದ್ರ, ಮಧುಗಿರಿ ತಾಲ್ಲೂಕು. | ತಹಸೀಲ್ದಾರ್, ಮಧುಗಿರಿ ತಾಲ್ಲೂಕು. |
| 38 | ಹೇಮಾ.ಹೆಚ್.ಸಿ. ಬಿನ್ ಆರ್.ಚಂದ್ರಶೇಖರ್, ಬಿಲ್ವ ನಿಲಯ, 2ನೇ ಮುಖ್ಯರಸ್ತೆ, 2ನೇ ಅಡ್ಡ ರಸ್ತೆ, ವಿಜಯನಗರ, ತುಮಕೂರು, ತುಮಕೂರು ತಾಲ್ಲೂಕು, ತುಮಕೂರು ಜಿಲ್ಲೆ. | ಗ್ರಾಮಲೆಕ್ಕಾಧಿಕಾರಿ, ಭೂಮಿ ಕೇಂದ್ರ, ತುಮಕೂರು ತಾಲ್ಲೂಕು | ತಹಸೀಲ್ದಾರ್, ತುಮಕೂರು ತಾಲ್ಲೂಕು. |
| 39 | ಹೆನ್ರಿ ನರೇಶ್.ಎಸ್. ಬಿನ್ ಲೇ..ಬಿ.ಎ.ಸುಗಂಧರಾಜು, ಮನೆ.ನಂ.250/12 . ಮೊದಲನೇ ಮಹಡಿ, ಮೊದಲನೇ ಅಡ್ಡರಸ್ತೆ, ಎಚ್ಚಮನಾಯಕ ರಸ್ತೆ, ಲಕ್ಷ್ಮಿಪುರ, ಹನುಮಂತನಗರ, ಬೆಂಗಳೂರು – 16 | ಗ್ರಾಮಲೆಕ್ಕಾಧಿಕಾರಿ, ಹೊಸಕೆರೆ ವೃತ್ತ, ಅಮೃತೂರು ಹೋಬಳಿ, ಕುಣಿಗಲ್ ತಾಲ್ಲೂಕು. | ತಹಸೀಲ್ದಾರ್, ಕುಣಿಗಲ್ ತಾಲ್ಲೂಕು. |

